CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೧೭, ೨೦೦೪ (ಜೇಷ್ಠ ೨೭ ಶಕ ವರ್ಷ ೧೯೨೬) | ಸಂಚಿಕೆ ೨೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು**

**ನಮೂನೆ 27 68(1)ನೇಯ ಪ್ರಕರಣದ ನಿಯಮ 94 ರನ್ವಯದ ಘೋಷಣೆ**

**ಸಂಖ್ಯೆ:ನಂ:ಪಿ.ಯು.ಸಿ: ಸಿಆರ್:4:02-03, ದಿನಾಂಕ: 14ನೇ ಮೇ 2004**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾಗಿರುವ ಬೆಂಗಳೂರು ದಕ್ಷಿಣ ತಾಲ್ಲೂಕು ಬೇಗೂರು ಹೋಬಳಿ, ಕಾಳೇನಅಗ್ರಹಾರ ಗ್ರಾಮದ ಸರ್ವೆ ನಂಬರು 43ರ ಸರ್ಕಾರಿ ಕೆರೆ ಅಂಗಳದಲ್ಲಿನ 50 x 75 ಅಡಿ ವಿಸ್ತೀರ್ಣದ ಅನಧಿಕೃತ ವಾಸದ ಮನೆಯನ್ನು ಸಕ್ರಮಗೊಳಿಸುವ ಬಗ್ಗೆ.

ಪ್ರಯುಕ್ತ ಕರ್ನಾಟಕ ಭೂ ಕಂದಾಯ ಅಧಿನಿಯಮದ 68ನೇಯ ಪ್ರಕರಣದ (1)ನೇಯ ಉಪ ಪ್ರಕರಣದಿಂದ ಕೊಡ ಮಾಡಲಾದ ಅಧಿಕಾರಗಳನ್ನು ಉಪಯೋಗಿಸುತ್ತಾ ಪೂರ್ವೋಕ್ತ ಸಾರ್ವಜನಿಕರಿಗೆ ಅಥವಾ ಎಲ್ಲಾ ವ್ಯಕ್ತಿಗಳಿಗೆ ಇರುವಂತ ಹಕ್ಕುಗಳು ರದ್ದುಗೊಳ್ಳತಕ್ಕದ್ದೆಂದು ಈ ಮೂಲಕ ಘೋಷಿಸಿದೆ.

ಈ ಕೆಳಕಂಡ ಸ್ವತ್ತಿನಲ್ಲಿ ಯಾವುದೇ ಹಿತಾಸಕ್ತಿಯನ್ನುಳ್ಳ ಅಥವಾ ಅಧಿಕಾರವನ್ನು ಹೊಂದಿರುವ ಸಾರ್ವಜನಿಕರ ಪೈಕಿ ಯಾವೊಬ್ಬ ಸದಸ್ಯನೂ ಅಥವಾ ಯಾವೊಬ್ಬ ವ್ಯಕ್ತಿಯೂ ಅಥವಾ ಇಂಥ ಪ್ರಸ್ತಾವದಿಂದ ಅನ್ಯಥಾ ಭಾಧಿತವಾಗುವ ಇತರೆ ಯಾವೊಂದು ಹಿತಾಸಕ್ತಿಯುಳ್ಳ ವ್ಯಕ್ತಿಯು ಈ ತಿಳುವಳಿಕೆ ಪತ್ರ (ನೋಟೀಸು) ಹೊರಟ ದಿನಾಂಕದಿಂದ ತೊಂಭತ್ತು (90) ದಿನಗಳೊಳಗಾಗಿ ತಹಸೀಲ್ದಾರ್ ರವರಿಗೆ ಈ ಪ್ರಸ್ತಾವದ ಬಗ್ಗೆ ತನಗಿರುವ ಆಕ್ಷೇಪಣೆಯನ್ನು ಕುರಿತು ಮತ್ತು ತನ್ನ ಹಿತಾಸಕ್ತಿ ಅಥವಾ ಹಕ್ಕಿನ ಸ್ವಭಾವ ಮತ್ತು ಅವುಗಳು ಯಾವ ರೀತಿಯಲ್ಲಿ ಅನ್ಯಥಾ ಭಾಧಿತವಾಗಬಹುದು ಮತ್ತು ಅಂಥಹ ಹಿತಾಸಕ್ತಿ ಅಥವಾ ಹಕ್ಕಿನ ಬಗೆಗಿನ ಪರಿಹಾರದ ಮೊಬಲಗು ಮತ್ತು ವಿವರಗಳನ್ನು ಲೇಖಿಯಲ್ಲಿ ಕೊಡತಕ್ಕದ್ದು ಮತ್ತು ಉಕ್ತ ಆಕ್ಷೇಪಣೆಗಳು ಮತ್ತು ಹಕ್ಕುಗಳು ಉಕ್ತ ಪ್ರಕರಣದಲ್ಲಿ ಉಪಬಂಧಿಸಿದ ಪ್ರಕಾರ ತಹಸೀಲ್ದಾರ್‌ರಿಂದ ಪರ್ಯಾಲೋಚಿಸಲ್ಪಡತಕ್ಕದ್ದು.

**ಅನುಸೂಚಿ**

1) ಬೆಂಗಳೂರು ಜಿಲ್ಲೆ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ಕಾಳೇನ ಅಗ್ರಹಾರ ಗ್ರಾಮದ ಸರ್ವೆ ನಂಬರು 43ರ ಸರ್ಕಾರಿ ಕೆರೆ ಅಂಗಳದಲ್ಲಿನ 50 x 75 ಅಡಿ ವಿಸ್ತೀರ್ಣದ ಅನಧಿಕೃತ ವಾಸದ ಮನೆಯನ್ನು ಸಕ್ರಮಗೊಳಿಸುವ ಬಗ್ಗೆ.

2) ನಕ್ಷೆ ಲಗತ್ತಿಸಿರುತ್ತೆ.

ಪಿ.ಆರ್. 785 — ತಹಸೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಅಬಕಾರಿ ಉಪ ನಿರೀಕ್ಷಕರು 2, ಚಿಕ್ಕಮಗಳೂರು ಉಪ ವಿಭಾಗ ಇವರ ಪ್ರವವ ಸಂಖ್ಯೆ. 64/2002-03 ದಿನಾಂಕ: 30.1.2003**

| | | |
|---|---|---|
| **ಉಪಸ್ಥಿತರು** | : | ಶ್ರೀ ಕೆ. ಭೀಮಪ್ಪ,<br>ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)<br>ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. |
| **ಫಿರ್ಯಾದುದಾರರು** | : | ಅಬಕಾರಿ ಉಪ ನಿರೀಕ್ಷಕರು 2 ಚಿಕ್ಕಮಗಳೂರು ಉಪ ವಿಭಾಗ |
| **ಆಪಾದಿತರು** | : | ಸುಬ್ರಮಣ್ಯಂ ಬಿನ್ ನಾಗಪ್ಪ ಮತ್ತು ಇತರರು |

## ಪ್ರಕರಣದ ಮುಖ್ಯಾಂಶಗಳು

ದಿನಾಂಕ: 30.1.2003 ರಂದು ಅಬಕಾರಿ ಉಪ ನಿರೀಕ್ಷಕರು 2, ಚಿಕ್ಕಮಗಳೂರು ಉಪ ವಿಭಾಗ, ಇವರು ಚಿಕ್ಕಮಗಳೂರು ನಗರದ ಚಿಕ್ಕಮಗಳೂರು : ಬೇಲೂರು ರಸ್ತೆ ಕೋಟೆ ಕೆರೆ ಹತ್ತಿರ ಕ್ಯಾಂಟರ್ ಲಾರಿ ಸಂಖ್ಯೆ ಕೆ ಎ.01 ಎ. 0957 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 608.400 ಲೀ. ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ಸುಬ್ರಮಣ್ಯಂ ಬಿನ್ ನಾಗಪ್ಪ ಮತ್ತು ಆರ್. ಜಗದೀಶ ಇವರುಗಳು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಂಬಂಧಪಟ್ಟ ದಾಖಲಾತಿಗಳನ್ನಾಗಲೀ ಹಾಜರು ಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರ.ವ.ವ. ಸಂಖ್ಯೆ. 64/2002-03 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ಇವರು ವಾಹನಕ್ಕೆ ರೂ.68,000/- ಗಳನ್ನು ಮಾತ್ರ ಬೆಲೆ ನಿಗದಿಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜಯನಗರ, ಬೆಂಗಳೂರು (ದಕ್ಷಿಣ), ಇವರಿಂದ ಪಡೆಯಲಾದ "ಬಿ" ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಆರ್. ಜಗದೀಶ, ನಂ. 28, 8ನೇ ಕ್ರಾಸ್, ಶ್ರೀನಗರ ಮುಖ್ಯರಸ್ತೆ, ಬೆಂಗಳೂರು-50. ಇವರಿಗೆ ಕಲಂ.43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ: 24.1.2004ರಂದು ನೋಟೀಸ್ "ಇನ್ ಸಫಿಷಿಯಂಟ್ ಅಡ್ರಸ್ಸ್ ಹೆನ್ಸ್‌ರಿಟರ್ನ್ಡ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ದಿನಾಂಕ: 25.12.2003ರಂದು ರಾಜ್ಯ ಪತ್ರಿಕೆಯಾದ ವಿಜಯ ಕರ್ನಾಟಕ ಪತ್ರಿಕೆಯಲ್ಲಿ ವಾಹನಕ್ಕೆ ಸಂಬಂಧಿಸಿದವರು 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ಅಂತಿಮ ಕಾಲಾವಕಾಶ ನೀಡಲಾಗಿದೆ. ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 608.400 ಲೀ. ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 606.915 ಲೀ. ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಒಂದು ವರ್ಷ, ನಾಲ್ಕು ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ಬಂದು ಯಾರು ಹಕ್ಕು ಸಾಧಿಸದೇ ಇರುವುದರಿಂದ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

### ಡಿ.ಟಿ.ಸಿ.ಆರ್. ಸಂಖ್ಯೆ. 720/2002-03, ದಿನಾಂಕ: 25ನೇ ಮೇ 2004

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಕೆ.ಎ. 01 ಎ. 0957 (ಕ್ಯಾಂಟರ್ ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 25ನೇ ಮೇ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 786

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಿಭಾಗ ಇವರ ಪ್ರವವ ಸಂಖ್ಯೆ. 49/2002-03 ದಿನಾಂಕ: 19.3.2003**

**ಚಿಕ್ಕಮಗಳೂರು ಗ್ರಾಮಾಂತರ ಪೋ. ಠಾ. ಕ್ರೈಂ ಸಂ. 80/2003 ದಿನಾಂಕ15ನೇ ಮಾರ್ಚ್ 2003**

**ಉಪಸ್ಥಿತರು** : ಶ್ರೀ ಕೆ. ಭೀಮಪ್ಪ,
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು** : ಆರಕ್ಷಕ ಉಪ ನಿರೀಕ್ಷಕರು ಚಿಕ್ಕಮಗಳೂರು ಗ್ರಾಮಾಂತರ ಪೋ. ಠಾಣೆ

**ಆಪಾದಿತರು** : ಬೀರೇಗೌಡ ಬಿನ್ ಚಿಕ್ಕೇಗೌಡ ಮತ್ತು ಇತರರು

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 15.3.2003 ರಂದು ಆರಕ್ಷಕ ಉಪ ನಿರೀಕ್ಷಕರು, ಚಿಕ್ಕಮಗಳೂರು ಗ್ರಾಮಾಂತರ ಪೊಲೀಸ್ ಠಾಣೆ ಇವರು ಚಿಕ್ಕಮಗಳೂರು ತಾಲ್ಲೂಕು, ಕರ್ತಿಕೆರೆ ಹತ್ತಿರ ಬೀರದೇವರ ಹಳ್ಳಿ ಕ್ರಾಸ್ ರಸ್ತೆಯಲ್ಲಿ ಆಟೋ ರಿಕ್ಷಾ ಸಂಖ್ಯೆ. ಕೆ ಎ.18. 3922 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 36.000 ಲೀಟರ್ ತೆರಿಗೆ ರಹಿತ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಬೀರೇಗೌಡ ಬಿನ್ ಚಿಕ್ಕೇಗೌಡ ಇವರು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಂಬಂಧಪಟ್ಟ ದಾಖಲಾತಿಗಳನ್ನಾಗಲೀ ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿಗೊಳಿಸಿ ನಂತರ ಜಾಮೀನಿನ ಮೇಲೆ ಬಿಡುಗಡೆ ಮಾಡಿ ಕ್ರೈಂ. ಸಂ. 80/2003 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. 49/2002-03 ದಿ. 19-03-2003 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ಇವರು ವಾಹನಕ್ಕೆ ರೂ.6500/- ಗಳನ್ನು ಮಾತ್ರ ಬೆಲೆ ನಿಗದಿಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಂದ ಪಡೆಯಲಾದ "ಬಿ" ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ರಾಮು ಬಿನ್ ಗುರುವಯ್ಯ, ಮನೆ ನಂ. 4, 4ನೇ ಕ್ರಾಸ್, ಶಂಕರಪುರ, ಚಿಕ್ಕಮಗಳೂರು ತಾಲ್ಲೂಕು, ಇವರು ಕಲಂ.43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಿದ್ದು ದಿನಾಂಕ: 11.7.2003ರಂದು ನೋಟೀಸ್ "ಇನ್ ಸಫಿಷಿಯಂಟ್ ಅಡ್ರಸ್ಸ್ ಹೆನ್ಸ್‌ರಿಟರ್ನ್ಡ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ಅಪರಾಧಿಯಾಗಿರುವ ಶ್ರೀ ಬೀರೇಗೌಡ ಬಿನ್ ಚಿಕ್ಕೇಗೌಡ, ಆಟೋ ಚಾಲಕ ವೃತ್ತಿ, ಬೀರದೇವರ ಹಳ್ಳಿ, ಚಿಕ್ಕಮಗಳೂರು ತಾಲ್ಲೂಕು ಇವರಿಗೆ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರು ನೋಟೀಸ್ ಜಾರಿ ಮಾಡಿದ್ದು, ಸ್ವೀಕೃತಿ ಪಡೆದಿರುವ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ದಿನಾಂಕ: 25.11.2003ರಂದು ಉದಯ ವಾಣಿ ಪತ್ರಿಕೆಯಲ್ಲಿ ವಾಹನಕ್ಕೆ ಸಂಬಂಧಿಸಿದ 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ಅಂತಿಮ ಕಾಲಾವಕಾಶ ನೀಡಲಾಗಿದೆ. ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 36.000 ಲೀ. ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 34.875 ಲೀ. ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಒಂದು ವರ್ಷ, ನಾಲ್ಕು ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ಬಂದು ಯಾರು ಹಕ್ಕು ಸಾಧಿಸದೇ ಇರುವುದರಿಂದ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಡಿ.ಟಿ.ಸಿ.ಆರ್. ಸಂಖ್ಯೆ. 802/2002-03, ದಿನಾಂಕ: 25ನೇ ಮೇ 2004**

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಕೆ.ಎ. 18 ಎ. 3922 (ಆಟೋರಿಕ್ಷಾ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 25ನೇ ಮೇ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುವುದು.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ)
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 787

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಅಧಿಭಾರ ಅರ್ಜಿ ಸಂ.10:03-04**

**ಅರ್ಜಿದಾರರು**

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ),
ಆಯನೂರು, ಶಿವಮೊಗ್ಗ ತಾಲ್ಲೂಕು ಇದರ ಪರವಾಗಿ ವ್ಯವಸ್ಥಾಪಕರು.

**ಎದುರು ಅರ್ಜಿದಾರರು**

1. ನಿರಂಜನಮೂರ್ತಿ (ಪೌತಿ)
   ಮಾಜಿ ಕಾರ್ಯದರ್ಶಿ.

   **ವಾರಸುದಾರರು**

   ಎ) ಶ್ರೀಮತಿ ಮಧು
   ಕೋಂ ನಿರಂಜನಮೂರ್ತಿ, ಹಾರ್‍ನಹಳ್ಳಿ ಅಂಚೆ,
   ಶಿವಮೊಗ್ಗ ತಾ:

   ಬಿ) ಪ್ರದೀಪ್,
   ಬಿನ್ ನಿರಂಜನಮೂರ್ತಿ, ಹಾರ್‍ನಹಳ್ಳಿ ಅಂಚೆ,
   ಶಿವಮೊಗ್ಗ ತಾ:

   ಸಿ) ರಜನೀಶ್, ಬಿನ್ ನಿರಂಜನಮೂರ್ತಿ,
   ಹಾರ್‍ನಹಳ್ಳಿ ಅಂಚೆ, ಶಿವಮೊಗ್ಗ ತಾ:

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತಿ ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕ್ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಬ್ಯಾಂಕಿನ 2001-02ನೇ ಸಾಲಿನ ಲೆಕ್ಕಪರಿಶೋಧನೆಯ ರೀತ್ಯಾ ದುರುಪಯೋಗವಾಗಿದೆಯೆಂಬ ಆಪಾದನೆಗೆ ಒಳಗಾದ ಶ್ರೀ ನಿರಂಜನಮೂರ್ತಿ (ಪೌತಿ) ಇವರಿಂದ ಒಟ್ಟು ರೂ. 663790-55 ಗಳ ಮೊತ್ತದ ಹಣದ ವಸೂಲಿ ಕ್ರಮಕ್ಕಾಗಿ ಅಧಿಭಾರ ಅರ್ಜಿ ಹೂಡಿ ಈ ಸಂಬಂಧವಾಗಿ ಅರ್ಜಿಯೊಂದನ್ನು ನೀಡಿ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಸದರಿಯವರ ಹೆಸರಿನಲ್ಲಿರುವ ಆಸ್ತಿಯನ್ನು ಮೇಲ್ಕಂಡ ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಅದರಂತೆ ಎದುರು ಅರ್ಜಿದಾರರು ಪೌತಿಯಾದ ಕಾರಣ ಅವರ ವಾರಸುದಾರರಾದ ಶ್ರೀಮತಿ ಮಧು (ಪತ್ನಿ) ಹಾಗೂ ಮಕ್ಕಳಾದ ಶ್ರೀ ಪ್ರದೀಪ್ ಮತ್ತು ರಜನೀಶ್ ಇವರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ಷರತ್ತು ಪೂರ್ವಕ ಜಪ್ತಿ ಆಜ್ಞೆಯ ನೋಟೀಸನ್ನು ದಿನಾಂಕ:3-3-2004 ರಂದು ಈ ನ್ಯಾಯಾಲಯ ನೋಟೀಸ್ ಹೊರಡಿಸಿದ್ದು, ಸದರೀ ಆಜ್ಞೆಯ ನೋಟೀಸ್ ಪ್ರತಿಯನ್ನು ಎದುರಿಗಳು ಪಡೆದು, ಅದರಲ್ಲಿನ ಷರತ್ತುಗಳನ್ನು ಪೂರೈಸಲು ವಿಫಲರಾಗಿರುವುದರಿಂದ ದಿನಾಂಕ:3-3-2004 ರಂದು ಹೊರಡಿಸಿದ ಷರತ್ತು ಪೂರ್ವ ಜಪ್ತಿ ಆಜ್ಞೆಯನ್ನು ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ.ಸನಿಶಿ 24:ಎಬಿಎನ್:ಎಬಿಜೆ:03-04, ದಿನಾಂಕ: 25ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎದುರು ಅರ್ಜಿದಾರರ ಹೆಸರಿನಲ್ಲಿರುವ ಈ ಕೆಳಕಂಡ "ಅನುಸೂಚಿ" ಯಲ್ಲಿ ತೋರಿಸಿದ ಸ್ಥಿರಾಸ್ತಿಯನ್ನು ಮೇಲ್ಕಂಡ ಅಧಿಭಾರ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ ದಿನಾಂಕ:3-3-04ರ ಷರತ್ತು ಪೂರ್ವಕ ಜಪ್ತಿ ಆಜ್ಞೆಯನ್ನು ಸ್ಥಿರೀಕರಣಗೊಳಿಸಿ ಆದೇಶಿಸಿದೆ.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ವತ್ತಿನ ಅನುಸೂಚಿ**

| ಕ್ರ. ಸಂ. | ಬಾಕಿದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಶ್ರೀ ನಿರಂಜನಮೂರ್ತಿ ಬಿನ್ ರಂಗಪ್ಪ | ಹಿಟ್ಟೂರು ಗ್ರಾಮ ಹಾರ್ನಹಳ್ಳಿ ಹೋಬಳಿ, ಶಿವಮೊಗ್ಗ ತಾ: | ಖಾತೆ ನಂ.87 ಹಾಗೂ 23:98-99 | 9.18 ಎ.ಗು. | ತರಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ:25-3-2004 ರಂದು ನೀಡಿದೆ.

ಪಿ.ಆರ್. 789 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಹಿರಿಯೂರು ತಾಲ್ಲೂಕು ವೀರಶೈವ ಪತ್ತಿನ ಸಹಕಾರ ಸಂಘ ನಿಯಮಿತ, ಹಿರಿಯೂರು**

**ಫಾರಂ ನಂ. 7**

**38ನೇ ರೂಲು(2)(ಸಿ)**

**ಸ್ಥಿರ ಸ್ವತ್ತುಗಳ ಜಪ್ತಿ ನೋಟೀಸು**

ಚಿತ್ರದುರ್ಗ ಜಿಲ್ಲಾ ಹಿರಿಯೂರು ತಾಲ್ಲೂಕಿನ, ಮಸ್ಕಲ್ ಮಟ್ಟಿ ಗ್ರಾಮದಲ್ಲಿರುವ ಎಂ.ವಿ. ಪೇಜಿಮುತ್ತು ಬಿನ್ ವೇಲುಸ್ವಾಮಿ ತ್ತೇವರ್ ಜಪ್ತಿ ನೋಟೀಸು

ನಂಬರ್ 105-28751ನೇ ಹಿರಿಯೂರು ತಾಲ್ಲೂಕು ವೀರಶೈವ ಪತ್ತಿನ ಸಹಕಾರ ಸಂಘಕ್ಕೆ ನಿಮ್ಮಿಂದ ಬರಬೇಕಾದ ಹಣವನ್ನು ಕೊಡಬೇಕಾಗಿ ಬರಹಮೂಲಕ ನಿಮಗೆ ತಿಳಿಸಿದಾಗ್ಯೂ ಸದರಿ ಹಣ ರೂ. 20,590-00 ಗಳನ್ನು ಈವರೆಗೆ ನೀವು ಕೊಡದೆ ಇರುವ ಕಾರಣದಿಂದಲೂ-ವ- ಕೊಡಲಿಕ್ಕೆ ತಪ್ಪಿದ ಕುರಿತು ತಕ್ಕುದಾದ ಕಾರಣಗಳನ್ನು ಕೊಡದೆ ಇದ್ದುದರಿಂದಲೂ ನಿಮ್ಮ ಹಕ್ಕಿನ ಈ ಕೆಳಗೆ ಕಾಣಿಸಿದ ಸ್ಥಿರ ಸ್ವತ್ತುಗಳನ್ನು ಜಪ್ತಿ ಮಾಡಲ್ಪಟ್ಟವೆಂಬುದಾಗಿ ನಿಮಗೆ ಈ ಮೂಲಕ ತಿಳಿಸೋಣಾಗುತ್ತದೆ. ಮತ್ತು ಬಾಕಿ ಹಣವನ್ನು ತಾ. 22.3.2004ರ ಒಳಗೆ ಬಡ್ಡಿ-ವ- ಇತರ ಖರ್ಚು ಸಮೇತ ಪಾವತಿ ಮಾಡದೆ ಇದ್ದರೆ ಕಾನೂನು ಪ್ರಕಾರ ಸದರಿ ಸ್ಥಿರಸ್ವತ್ತುಗಳು ಮಾರಾಟ ಮಾಡಲ್ಪಡುವುವು.

ಸಾಲಗಾರರ ಹೆಸರು:- ಎಂ.ವಿ. ಪೇಜಿಮುತ್ತು ಬಿನ್ ವೇಲುಸ್ವಾಮಿತ್ತೇವರ್ ತಾಯಿ ರಾಜಲಕ್ಷ್ಮಿ ಕೋಂ ವೇಲುಸ್ವಾಮಿತ್ತೇವರ್

**ಸ್ಥಿರ ಸ್ವತ್ತುಗಳ ಯಾದಸ್ತು**

| | | | | ಚಕ್ಕುಬಂದಿ | |
|---|---|---|---|---|---|
| ಸೈಟ್ ನಂ | : | 16 | ಪೂರ್ವಕ್ಕೆ | : | 15 ನಂ |
| ಸರ್ವೆ ನಂ | : | 14 | ಪಶ್ಚಿಮಕ್ಕೆ | : | ರಸ್ತೆ |
| ವಿಸ್ತೀರ್ಣ | : | 40x32 | ಉತ್ತರಕ್ಕೆ | : | ಗಲ್ಲಿ |
| | | | ದಕ್ಷಿಣಕ್ಕೆ | : | 17-18 ನಂ |

ಮೊಕ್ಕಾಂ : ಹಿರಿಯೂರು ಮಾರಾಟಾಧಿಕಾರಿ

ತಾರೀಖು:- 6.3.2004 ಸಹಕಾರ ಸಂಘಗಳ ಸಹಾಯಕರ ನಿಬಂಧಕರ ಕಛೇರಿ, ಚಿತ್ರದುರ್ಗ

ಪಿ.ಆರ್. 790

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು** : ಕೆ. ಲೋಕನಾಥಶೆಟ್ಟಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಫಿರ್ಯಾದುದಾರರು** : ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ, (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು** : ಎ.ಎಸ್. ಬಾಲಸುಬ್ರಮಣ್ಯ ಬಿನ್ ಶ್ರೀಕಂಠ ಜೋಯ್ಸ ಮ್ಯಾನೇಜರ್, ವಿಜಯ ಕರ್ನಾಟಕ ದಿನಪತ್ರಿಕೆ ಶಿವಮೊಗ್ಗ (ಶ್ರೀ ಅನಂತರಾಮ್‌ಸಿಂಗ್, ಎಸ್.ಡಿ. ವಕೀಲರು, ಶಿವಮೊಗ್ಗ)

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 7-9-01 ರಂದು ವಾಹನ ಅಂಬಾಸೇಡರ್ ಕಾರು ನೋಂದಣಿ ಸಂಖ್ಯೆ:ಸಿಆರ್‌ಡಬ್ಲ್ಯೂ-9957ರಲ್ಲಿ ಒಟ್ಟು 48 ಕೆಜಿ ತೂಕದ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಶಿವಮೊಗ್ಗ ಹೊನ್ನಾಳ್ಳಿ ಮುಖ್ಯ ರಸ್ತೆಯ 34ನೇ ಕಿಮಿ ರಲ್ಲಿನ ಹತ್ತಿರ ಸಾಗಿಸುತ್ತಿದ್ದಾಗ, ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ತಪಾಸಣೆ ಮಾಡಿ ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ತುಂಡುಗಳ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:42:01-02ನ್ನು ದಾಖಲು ಮಾಡಿಕೊಂಡು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಇಬ್ಬರು ಆಸಾಮಿಗಳನ್ನು ದಸ್ತಗಿರಿ ಮಾಡಿಕೊಂಡು ನ್ಯಾಯಾಂಗ ವಶಕ್ಕೆ ಕೊಟ್ಟು, ವಶಪಡಿಸಿಕೊಂಡ ವಾಹನ ಹಾಗೂ ಶ್ರೀಗಂಧವನ್ನು ಸಂಬಂಧಪಟ್ಟ ದಾಖಲಾತಿಯೊಂದಿಗೆ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸಮಕ್ಷಮ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಮುಂದಿನ ಕ್ರಮಕ್ಕಾಗಿ ಹಾಜರ್‌ಪಡಿಸಿದ್ದು ಇರುತ್ತದೆ. ಈ

ಪ್ರಕರಣಕ್ಕೆ ಸಂಬಂಧಿಸಿದಂತೆ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿ.ಆರ್.ಡಬ್ಲ್ಯೂ-9957 ಹಾಗೂ ಅದರಲ್ಲಿದ್ದ ಒಟ್ಟು 48 ಕೆಜಿ ತೂಕದ ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಕುರಿತು 30 ದಿವಸಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟ ಮೂಲ ದಾಖಲಾತಿಗಳೊಂದಿಗೆ ಹಕ್ಕುಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:22-09-01 ರ ಸಾಗರ ಸಂದೇಶ ದಿನಪತ್ರಿಕೆ ದಿನಾಂಕ:24-09-01ರ ಛಲದಂಕಮಲ್ಲ ಕನ್ನಡ ದಿನಪತ್ರಿಕೆ ಹಾಗೂ ನವೆಂಬರ್ 15, 2001ರ ಭಾಗ-3ರ ಪುಟಸಂಖ್ಯೆ:2683ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಅನಂತರ ದಿನಾಂಕ:16-03-02 ರಂದು ವಾಹನ ಮಾಲೀಕರೆಂದು ಶ್ರೀ ಎ.ಎಸ್. ಬಾಲಸುಬ್ರಮಣ್ಯ ರವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ವಾಹನವನ್ನು ಬಿಟ್ಟುಕೊಡುವಂತೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಮಧ್ಯೆ ಸದರಿ ವಾಹನದ ಮೂಲ ವಾರಸುದಾರರ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಶಿವಮೊಗ್ಗ ರವರಲ್ಲಿ ಪತ್ರ ವ್ಯವಹರಿಸಿ 'ಬಿ' ವರದಿಯನ್ನು ಪಡೆದು ಪರಿಶೀಲಿಸಿದಾಗ, ವಾಹನವು ಎ.ಎಸ್. ಬಾಲಸುಬ್ರಮಣ್ಯ ಬಿನ್ ಶ್ರೀಕಂಠಜೊಯ್ಸ ಮ್ಯಾನೇಜರ್, ವಿಜಯಕರ್ನಾಟಕ ದಿನಪತ್ರಿಕೆ ಕೆ.ಆರ್. ಪುರಂ ಶಿವಮೊಗ್ಗ ರವರ ಹೆಸರಿನಲ್ಲಿರುತ್ತದೆಂದು ತಿಳಿಸಿರುತ್ತಾರೆ. ಅದರಂತೆ ವಾಹನ ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಬಿ ಪ್ರಕಾರ ಈ ಪ್ರಾಧಿಕಾರದಿಂದ ಕಾರಣ ಕೇಳುವ ಪತ್ರವನ್ನು ದಿನಾಂಕ:05-04-02 ರಂದು ಜಾರಿ ಮಾಡಿದ್ದು, ಅದಕ್ಕೆ ಉತ್ತರವನ್ನು ದಿನಾಂಕ:12-04-02 ರಂದು ಮಾಲೀಕರು ಈ ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ.

ಮುಂದುವರಿದು ದಿನಾಂಕ:16-03-02 ರಂದು ಅರ್ಜಿದಾರರು ವಾಹನ ಬಿಡುಗಡೆಗೆ ಕೋರಿದ ಅರ್ಜಿಗೆ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ:20-06-02 ರಂದು ತಕರಾರು ಸಲ್ಲಿಸಿರುವುದನ್ನು ಪರಿಗಣಿಸಿ, ಅರ್ಜಿದಾರರ ಅರ್ಜಿಯನ್ನು ಸಹ ಪರಿಶೀಲಿಸಿದಾಗ ಅರ್ಜಿದಾರರ ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರದೇ ಪೂರ್ಣ ಬಿಡುಗಡೆಗೆ ಕೋರಿದ್ದರಿಂದ, ಈ ಪ್ರಕರಣದ ಪೂರ್ಣ ವಿಚಾರಣೆಯ ಅವಶ್ಯಕತೆಯಿರುವುದರಿಂದ ವಿಚಾರಣೆಯನ್ನು ಪ್ರಾರಂಭಿಸಿ, ಅಭಿಯೋಜನಾ ಪರ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಒಬ್ಬ ಸಾಕ್ಷಿದಾರರನ್ನು ವಿಚಾರಿಸಿಕೊಂಡಿದ್ದು, ಅರ್ಜಿದಾರರು ತನ್ನನ್ನು ಮಾತ್ರ ವಿಚಾರಣೆಗೊಳಪಡಿಸಿರುತ್ತಾನೆ. ಸಾಕ್ಷಿಗಳ ವಿಚಾರಣೆಯ ನಂತರ ಅಭಿಯೋಜನಾ ಪರ ಸಹಾಯಕ ಅಭಿಯೋಗ ನಿರ್ದೇಶಕರು ಮತ್ತು ಅರ್ಜಿದಾರರ ಪರ ವಕೀಲರ ವಾದ-ವಿವಾದಗಳನ್ನು ಆಲಿಸಿದ್ದು, ಈ ಮೇಲಿನ ಪ್ರಕರಣದ ಸಾರಾಂಶದಿಂದ ಈ ಕೆಳಕಂಡ ಅಂಶಗಳು ನನ್ನ ತೀರ್ಮಾನಕ್ಕೆ ಉದ್ಭವಿಸಿರುತ್ತದೆ.

1) ದಿನಾಂಕ:7-9-01 ರಂದು ವಾಹನ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ: ಸಿಆರ್‌ಡಬ್ಲ್ಯೂ-9957 ರಲ್ಲಿ ಶ್ರೀಗಂಧದ ಕಳ್ಳ ಸಾಗಾಣಿಕೆಗೆ ಉಪಯೋಗಿಸಿದ್ದಾರೆಂದು ಅಭಿಯೋಜನವು ಸಿದ್ದಪಡಿಸುವುದೇ?

2) ಕಳ್ಳ ಸಾಗಾಣಿಕೆಯಲ್ಲಿ ಅಮಾನತ್ತು ಪಡಿಸಿದ ಶ್ರೀಗಂಧವು ಸರ್ಕಾರದ ಸೊತ್ತೆ?

3) ವಾಹನ ಮಾಲೀಕರು ಸದರಿ ವಾಹನದಲ್ಲಿ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಆದ ಬಗ್ಗೆ ತನಗೆ ಗೊತ್ತಿಲ್ಲ ಎಂಬ ವಿಷಯದ ಬಗ್ಗೆ ಅಥವಾ ಅಪರಾಧಕ್ಕೆ ವಾಹನವನ್ನು ಉಪಯೋಗ ಮಾಡದಂತೆ ಸಮರ್ಪಕ ಮತ್ತು ಅಗತ್ಯವಾದ ಮುಂಜಾಗ್ರತೆಯನ್ನು ಕೈಗೊಂಡಿದ್ದಾನೆಂಬ ಬಗ್ಗೆಯ ವಿಷಯವನ್ನು ಸಿದ್ದಪಡಿಸುವನೇ?

4) ಯಾವ ಆದೇಶ?

ಮೇಲೆ ತಿಳಿಸಿದ ಪರಿಶೀಲನಾ ಅಂಶಗಳನ್ನು ಲಭ್ಯವಿದ್ದ ಸಾಕ್ಷ್ಯಾಧಾರದ ಮೇಲೆ, ಈ ಕೆಳಗಿನಂತೆ ಉತ್ತರಿಸುತ್ತೇನೆ.

1) ಮತ್ತು 2)ನೇ ಪರಿಶೀಲನಾ ಅಂಶಗಳನ್ನು ಗುಣಾತ್ಮಕವಾಗಿ,

3)ನೇ ಪರಿಶೀಲನಾ ಅಂಶವನ್ನು ನಕಾರಾತ್ಮಕವಾಗಿ,

4)ನೇ ಪರಿಶೀಲನಾ ಅಂಶವನ್ನು ಕೊನೆಯ ಆದೇಶದಂತೆ.

ಈ ಪ್ರಕರಣದ 1 ಮತ್ತು 2ನೇ ಪರಿಶೀಲನಾಂಶಗಳನ್ನು ಒಟ್ಟಿಗೆ ಅಭಿಯೋಗದ ಸಾಕ್ಷ್ಯಾಧಾರದ ತುಲನೆಯಿಂದ ವಿಮರ್ಶಿಸುವುದು ಅವಶ್ಯವೆಂದು ಹಾಗೂ ಸಮಂಜಸವೆಂದು ಭಾವಿಸಿ ಈ ಎರಡೂ ಅಂಶಗಳನ್ನು ಒಟ್ಟಿಗೆ ಚರ್ಚಿಸಿರುತ್ತೇನೆ.

ಅಭಿಯೋಗವು ಮುಖ್ಯ ಸಾಕ್ಷಿಯನ್ನು ಪಿಡಬ್ಲ್ಯೂ-1 ವಿಚಾರಣೆ ಮಾಡಿದ್ದು, ಪಿಡಬ್ಲ್ಯೂ-1 ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರಾಗಿದ್ದು ಇವರು ದಿನಾಂಕ:12-12-02 ರಂದು ನುಡಿದ ಸಾಕ್ಷ್ಯದಲ್ಲಿ, ದಿನಾಂಕ:30-06-2000 ರಿಂದ 09-10-02 ರವರೆಗೆ ಅರಣ್ಯ ಸಂಚಾರಿ ದಳದಲ್ಲಿ ಕರ್ತವ್ಯ ನಿರ್ವಹಿಸಿದ್ದು ದಿನಾಂಕ:07-09-01ರ ಬೆಳಿಗ್ಗೆ ಶ್ರೀಗಂಧ ಕಳ್ಳ ಸಾಗಾಣಿಕೆಯ ಮಾಹಿತಿ ಮೇರೆಗೆ ಅಧೀನ ಸಿಬ್ಬಂದಿಯೊಂದಿಗೆ ಹೊನ್ನಾಳಿ ಮುಖ್ಯ ರಸ್ತೆಯ 34 ಕಲ್ಲಿನ ಹತ್ತಿರ ನಿಂತು ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ ಬೆಳಿಗ್ಗೆ 8-30ರ ಸಮಯದಲ್ಲಿ ಶಿವಮೊಗ್ಗ ಕಡೆಯಿಂದ ಒಂದು ಅಂಬಾಸೇಡರ್ ಕಾರು ಬರುವುದು ಕಂಡು ಸಿಬ್ಬಂದಿಯವರು ವಾಹನವನ್ನು ನಿಲ್ಲಿಸಲು ಸೂಚಿಸಿದಾಗ ಆ ವಾಹನವು 10 ಮೀ ದೂರದಲ್ಲಿ ನಿಲ್ಲಿಸಿ ಆಸಾಮಿಗಳು ಪರಾರಿಯಾಗಲು ಪ್ರಯತ್ನಿಸಿದರು. ಕೂಡಲೇ ಇಲಾಖೆಯವರು ಇಬ್ಬರು ಅಸಾಮಿಗಳನ್ನು ಬಂಧಿಸಿದರು. ನಂತರ ವಾಹನವನ್ನು ಪರಿಶೀಲಿಸಿದಾಗ ಡಿಕ್ಕಿಯಲ್ಲಿ ಶ್ರೀಗಂಧದ ತುಂಡುಗಳು ಇರುವುದು ಕಂಡು ಬಂದವು. ಈ ಬಗ್ಗೆ ಬಂಧಿಸಿದ ಅಸಾಮಿಯವರಲ್ಲಿ ರಹದಾರಿ ಕೇಳಲಾಗಿ ಇಲ್ಲವೆಂದು ತಿಳಿಸಿದರು. ನಂತರ ಶ್ರೀಗಂಧ ತುಂಡುಗಳನ್ನು ಪರಿಶೀಲಿಸಿದಾಗ ಅಕ್ರಮವೆಂದು ತಿಳಿಯಿತು. ನಂತರ ವಾಹನವನ್ನು ಪರಿಶೀಲಿಸಿದಾಗ ಸಿಆರ್‌ಡಬ್ಲ್ಯೂ-9957 ಇದ್ದು ಈ ಬಗ್ಗೆ ಸ್ಥಳದಲ್ಲಿ ಪಂಚನಾಮೆ ಕ್ರಮದ ಸಮಯದಲ್ಲಿ ಸ್ಥಳೀಯ ಪಂಚರು ಯಾರು ದೊರಕಲಿಲ್ಲವಾದ್ದರಿಂದ ಇಲಾಖೆಯವರೇ ಪಂಚರಾಗಿ ಪಂಚನಾಮೆ ಕ್ರಮವನ್ನು ಜರುಗಿಸಲಾಯಿತು. ಮತ್ತು ನಿಶಾನೆ ಪಿ1 ರಂತೆ ಮಹಜರನ್ನು ಮಾಡುವ ಮೂಲಕ ಅಂಬಾಸೇಡರ್ ಕಾರನ್ನು ನೊಂದಣಿ

ಸಂಖ್ಯೆ:ಸಿಆರ್‌ಡಬ್ಲ್ಯೂ-9957 ಮತ್ತು ಕಾರಿನಲ್ಲಿದ್ದ ಶ್ರೀಗಂಧ ತುಂಡುಗಳನ್ನು ಅಮಾನತ್ತುಪಡಿಸಿ ಪಿ2 ಪ್ರಕಾರ ಮೊಕದ್ದಮೆಯನ್ನು ದಾಖಲಿಸಿಕೊಂಡಿದ್ದು, ಮುದ್ದೇಮಾಲು ಎಂಓ1 ಅಂಬಾಸೇಡರ್ ಕಾರು ಸಂಖ್ಯೆ:ಸಿಆರ್‌ಡಬ್ಲ್ಯೂ-9957 ನ್ನು ಹಾಗೂ ಎಂಓ 2 ರಿಂದ 17 ಶ್ರೀಗಂಧದ ತುಂಡುಗಳನ್ನು, ಜಪ್ತಿಮಾಡಿಕೊಂಡ ಬಗ್ಗೆ ಹಾಗೂ ಅವುಗಳನ್ನು ಪ್ರಾಧಿಕಾರದ ಮುಂದೆ ಗುರುತಿಸಿದ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ.

ಈ ಸಾಕ್ಷಿಯು ಪಾಟಿ ಸವಾಲಿನಲ್ಲಿ ಮುಖ್ಯವಾಗಿ ವಾಹನವನ್ನು ತಪಾಸಣೆ ಮಾಡುವ ಮೂಲಕ ಜಪ್ತಿ ಮಾಡಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಹಾಗೂ ಸ್ಥಳಕ್ಕೆ ಹೋಗಿಲ್ಲ, ಮಾಹಿತಿ ಬಂದಿಲ್ಲ ಕಾರುಗಳನ್ನು ತಪಾಸಣೆ ಮಾಡಿಲ್ಲ, ಮಹಜರ್ ಕಛೇರಿಯಲ್ಲಿ ಸೃಷ್ಟಿಸಿರುವುದು ಎನ್ನುವುದನ್ನು ನಿರಾಕರಿಸಿರುತ್ತಾರೆ. ಅದರ ಅರ್ಜಿದಾರರು ಪಿಡಬ್ಲ್ಯೂ-1 ಸಾಕ್ಷ್ಯದಲ್ಲಿ ದಿನಾಂಕ:7-09-01 ರಂದು ಅರಣ್ಯ ಸಂಚಾರಿ ದಳದವರು ಶ್ರೀಗಂಧದ ಸಂಬಂಧ ಆ ವಾಹನವನ್ನು ಈ ಪ್ರಕರಣದಲ್ಲಿ ಜಪ್ತಿ ಮಾಡಿರುವುದು ನಿಜವಿರುತ್ತದೆಂದು ಒಪ್ಪಿಕೊಂಡಿದ್ದು, ಇದರಿಂದ ಅಭಿಯೋಗದ ನಿಲುವನ್ನು ಒಪ್ಪಿಕೊಂಡಿರುತ್ತಾರೆಂದು ಒಪ್ಪಿಕೊಳ್ಳಬಯಸುತ್ತೇನೆ. ಸದರಿಯವರ ಸಾಕ್ಷ್ಯದಿಂದ ಘಟನೆ ಹೇಗೆ ನಡೆಯಿತು ವಾಹನದಲ್ಲಿ ಯಾವ ವಸ್ತುಗಳು ಇದ್ದವು, ತನಿಖಾಧಿಕಾರಿಗಳು ತೆಗೆದುಕೊಂಡ ಕ್ರಮದ ಬಗ್ಗೆ ತಿಳಿಸಿರುತ್ತಾರೆ.

ಈ ಪ್ರಕರಣದಲ್ಲಿ ಅಂಬಾಸೇಡರ್ ಕಾರು ಸಂಖ್ಯೆ:ಸಿಆರ್‌ಡಬ್ಲ್ಯೂ-9957 ರಲ್ಲಿದ್ದ ಶ್ರೀಗಂಧದ ಬಗ್ಗೆ ಬಂಧಿಸಿದ ಆಸಾಮಿಯ ಹತ್ತಿರ ವಿಚಾರಿಸಿದಾಗ, ಯಾವುದೇ ರಹದಾರಿ ವಗೈರೆ ಇಲ್ಲದೇ ಇದ್ದು ಶ್ರೀಗಂಧದ ಮೇಲೆ ಯಾವುದೇ ಛಾಪ ಗುರುತಿಲ್ಲದೇ ಇರುವುದರಿಂದ ಅಕ್ರಮವೆಂದು ಪರಿಗಣಿಸಿ ಇಲಾಖಾ ಪರ ಅಮಾನತ್ತುಪಡಿಸಲಾಗಿರುತ್ತದೆ. ಸದರಿ ಅಮಾನತ್ತುಪಡಿಸಿದ್ದ ಶ್ರೀಗಂಧವು ಎನ್ನುವುದಕ್ಕೆ ಪರೀಕ್ಷೆಗೊಳಪಡಿಸಿ ಪಡೆದ ದೃಢೀಕರಣ ಪತ್ರ ಹಾಜರ್‌ಪಡಿಸಿ ಗುರುತಿಸಿದ್ದು ನಿಶಾನೆ-ಪಿ5 ಇರುವುದರಿಂದ ಹಾಗೂ ಅಮಾನತ್ತುಪಡಿಸಿದ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಪರವಾನಿಗೆ ಇಲ್ಲದೇ ಸಾಗಿಸಿರುವುದು ಕಾನೂನು ಬಾಹಿರವಾಗಿರುತ್ತದೆ.

ಆದ್ದರಿಂದ ಅಭಿಯೋಗವು ಮೇಲೆ ತಿಳಿಸಿದ ಸಾಕ್ಷ್ಯಗಳ ಸಾಕ್ಷ್ಯಾದಿಂದ ಹಾಗೂ ಅರ್ಜಿದಾರರ ಸಾಕ್ಷ್ಯದಿಂದ ದಿನಾಂಕ:07-09-01 ರಂದು ಅಂಬಾಸೇಡರ್ ಕಾರಿನಲ್ಲಿ ಸರ್ಕಾರದ ಸ್ವತ್ತಾದ ಶ್ರೀಗಂಧವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದಾಗ ಅರಣ್ಯ ಇಲಾಖೆಯವರು ಅದನ್ನು ಜಪ್ತಿ ಮಾಡಿರುತ್ತಾರೆಂದು ಮತ್ತು ಸದರಿ ವಾಹನ ಕಾನೂನು ಬಾಹಿರವಾಗಿ ಶ್ರೀಗಂಧವನ್ನು ಸಾಗಾಣಿಕೆಗೆ ಉಪಯೋಗಿಸಲ್ಪಟ್ಟಿತೆಂದು ಅಭಿಯೋಗವು ತೃಪ್ತಿಕರವಾಗಿ ಸಿದ್ದಪಡಿಸಿದೆ ಎಂದು 1 ಮತ್ತು 2ನೇ ಪರಿಶೀಲನಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇನ್ನು ವಿವಾದಾಂಶ 3ರ ಕುರಿತು ಅರ್ಜಿದಾರರ ಪರ ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಈ ಕೆಳಗೆ ತಿಳಿಸಿದಂತೆ ವಿಮರ್ಶಿಸಿರುತ್ತೇನೆ.

ಅರ್ಜಿದಾರರ ಪರ ತನ್ನನ್ನು ಮಾತ್ರ ವಿಚಾರಿಸಿಕೊಂಡಿದ್ದು, ಅದರಲ್ಲಿ ಅರ್ಜಿದಾರರಾದ ಶ್ರೀ ಎ.ಎಸ್. ಬಾಲಸುಬ್ರಮಣ್ಯಂ ಇವರು ದಿನಾಂಕ:9-1-03 ರಂದು ನೀಡಿದ ತಮ್ಮ ಸಾಕ್ಷಿಯಲ್ಲಿ ಸಿಆರ್‌ಡಬ್ಲ್ಯೂ-9957ರ ಅಂಬಾಸೇಡರ್ ಕಾರಿನ ಆರ್.ಸಿ. ಮಾಲೀಕನಾಗಿರುತ್ತೇನೆ. ಈಚೆಗೆ 1 ವರ್ಷ 2 ತಿಂಗಳ ಹಿಂದೆ ಅರವಿಂದ ಎಂಬುವವರಿಗೆ 90,000-00 ಕ್ಕೆ ವಾಹನ ಮಾರಾಟ ಮಾಡಿರುತ್ತೇನೆ. ಕಾರು ಮಾರುವಾಗ ಕಾರಿನ ಮೇಲೆ ಸಾಲವಿದ್ದು ಈ ಬಗ್ಗೆ ಅಗ್ರಿಮೆಂಟ್ ಮಾಡಿರುತ್ತದೆ. ಈ ಸಂಬಂಧ ಒಪ್ಪಂದದಲ್ಲಿ 20,000-00 ನಗದಾಗಿ, ರೂ. 30,000-00 ಚೆಕ್ ಪಡೆದಿದ್ದು ಉಳಿದ 40,000-00 ವನ್ನು ತರುವಾಯ ಹಿರಣ್ಣಯ್ಯ ಫೈನಾನ್ಸ್‌ಗೆ ಕಟ್ಟಿ ಸಾಲವನ್ನು ತೀರಿಸುವಂತೆ ಒಪ್ಪಂದವಾಗಿತ್ತು. ಫೈನಾನ್ಸ್‌ಗೆ ಹಣ ಪಾವತಿ ಮಾಡದೇ ಹೋದಲ್ಲಿ ಕರಾರು ಒಪ್ಪಂದ ರದ್ದಾಗಿರುತ್ತದೆಂದು ತಿಳಿಸಿರುತ್ತಾರೆ. ಮುಂದುವರಿದು ಅರಣ್ಯ ಇಲಾಖೆಯಿಂದ ಫೋನ್ ಬಂದ ನಂತರವೇ ನನಗೆ ತನ್ನ ಕಾರು ಮೊಕದ್ದಮೆಯಲ್ಲಿ ಸಿಲುಕಿರುವುದು ಗೊತ್ತಾಯಿತು. ನಂತರ ಫೈನಾನ್ಸ್‌ಗೆ, ಬ್ಯಾಂಕ್‌ನಿಂದ ಸಾಲ ಪಡೆದು ತೀರಿಸಿದೆ. ತನ್ನ ತಪ್ಪು ಏನೂ ಇಲ್ಲ ಆದ್ದರಿಂದ ವಾಹನವನ್ನು ಬಿಡುಗಡೆ ಮಾಡುವುದಕ್ಕೆ ಕೇಳಿಕೊಂಡಿರುವುದಾಗಿ ನುಡಿದಿರುತ್ತಾರೆ. ಹಾಗೂ ಕಾರಿನ ಆರ್‌ಸಿ ನಕಲನ್ನು ಹಾಗೂ ಕಾರು ಮಾರಾಟದ ಸಂಬಂಧದ ಒಪ್ಪಂದದ ನಕಲನ್ನು ನೋಡಿದ್ದು ನಿಶಾನೆ ಡಿ1 ಮತ್ತು ಡಿ2ನ್ನು ಗುರ್ತಿಸಿರುತ್ತಾರೆ.

ಈ ಸಾಕ್ಷಿಯ ಪಾಟಿ ಸವಾಲನ್ನು ಸಹಾಯಕ ಅಭಿಯೋಗ ನಿರ್ದೇಶಕರು ಮಾಡಿದ್ದು ಅಗ್ರಿಮೆಂಟ್ ಪ್ರಕಾರ ಕಾರನ್ನು ಮಾರಾಟ ಮಾಡಿದ ನಂತರ ಖರೀದಿದಾರರಾದ ಅರವಿಂದ ಇವರು ಮುಂದೆ ಕಾನೂನು ಬಾಹಿರ ಚಟುವಟಿಕೆಯಲ್ಲಾಗಲೀ ಅಥವಾ ಹಣಕಾಸಿನ ವಿಷಯದಲ್ಲಾಗಲೀ ಉಲ್ಲಂಘನೆ ಮಾಡಿದರೆ ಆತನೇ ಜವಾಬ್ದಾರರೆಂದು ನಿರ್ಬಂಧ ವಿಧಿಸಲಾಗುವುದು ಎಂಬುದನ್ನು ಒಪ್ಪಿಕೊಂಡಿರುತ್ತಾರೆ. ಹಾಗೂ ದಿನಾಂಕ:14-06-01 ರಂದು ಕರಾರು ಮಾಡಿರುವುದನ್ನು ಒಪ್ಪಿಕೊಂಡಿರುತ್ತಾರೆ. ಕರಾರಿನ ಅವಧಿ ಮುಗಿದ ಬಳಿಕ ಆತನ ವಿರುದ್ಧ ಹಣ ವಸೂಲಾತಿಗಾಗಿ ಅಥವಾ ಕಾರು ವಾಪಸ್ಸು ಪಡೆಯುವ ಬಗ್ಗೆ ಯಾವುದೇ ಕ್ರಮ ಕೈಗೊಂಡಿಲ್ಲ ಎನ್ನುವುದನ್ನು ಒಪ್ಪಿಕೊಂಡಿರುತ್ತಾರೆ. ಹಾಗೂ ದಿನಾಂಕ: 07-09-01 ರಂದು ಅರಣ್ಯ ಸಂಚಾರಿ ದಳದವರು ಶ್ರೀಗಂಧದ ಸಂಬಂಧ ಸದರಿ ಕಾರು ವಾಹನವನ್ನು ಈ ಪ್ರಕರಣದಲ್ಲಿ ಜಪ್ತಿ ಮಾಡಿರುವುದನ್ನು ಸಹ ಒಪ್ಪಿಕೊಂಡಿರುತ್ತಾರೆ.

ಕರಾರಿನ ಒಪ್ಪಂದದ ಪ್ರಕಾರ ದಿನಾಂಕ:4-7-01ರ ಒಳಗಾಗಿ ಹಣ ಪಾವತಿ ಮಾಡಲು ತಪ್ಪಿದರೆ ಮುಂಗಡ ಹಣವನ್ನು ಮುಟ್ಟುಗೋಲು ಹಾಕಿಕೊಂಡು ವಾಹನ ಹಿಂದಕ್ಕೆ ಪಡೆಯುವ ಸಂಪೂರ್ಣ ಹಕ್ಕನ್ನು ಹೊಂದಿದರೂ ಕೂಡ, ಯಾವುದೇ ಕ್ರಮವನ್ನು ಕೈಗೊಳ್ಳದೇ, ಅರ್ಜಿದಾರರಾದ ವಾಹನ ಮಾಲೀಕರು ಉದಾಸೀನ ಮನೋಭಾವ ತೋರಿ ತಟಸ್ಥರಾಗಿ ಕುಳಿತಿರುವುದನ್ನು ನೋಡಿದರೆ ಅರ್ಜಿದಾರರ ಉದ್ದೇಶಿತನದ ಬಗ್ಗೆ ಸಂಪೂರ್ಣ ಸಂಶಯಕ್ಕೆ ಎಡೆ ಮಾಡಿದೆ.

ಲಕ್ಷಾಂತರ ರೂಪಾಯಿ ಬೆಲೆ ಬಾಳುವ ವಾಹನದ ಮಾಲೀಕರಾಗಿದ್ದು, ಕರಾರಿನ ವಾಯಿದೆ ಮುಗಿದ ಕೂಡಲೇ ಪೊಲೀಸ್ ಕಂಪ್ಲೆಂಟ್ ಕೊಡಬಹುದಾಗಿತ್ತು. ಇಲ್ಲವಾದಲ್ಲಿ ಹಣ ಪಡೆಯುವ ಬಗ್ಗೆ ಸಿವಿಲ್ ವ್ಯಾಜ್ಯ ಹೂಡಬಹುದಾಗಿತ್ತು. ಇಲ್ಲವಾದಲ್ಲಿ ಮತ್ತೊಂದು ಹೊಸ ಕರಾರು ಪತ್ರ ಮಾಡಬಹುದಾಗಿತ್ತು. ಯಾವುದನ್ನು ಮಾಡದೇ, ವಾಹನದ ಮೇಲೆ ನಿಗಾವನ್ನು ಇಡದೇ ಇದ್ದು, ಕರಾರಿನ ವಾಯಿದೆ ಮುಗಿದ ಮೂರು ತಿಂಗಳವರೆಗೂ ಸುಮ್ಮನಿರುವುದನ್ನು ಗಮನಿಸಿದರೆ ವಾಹನದ ಬಗ್ಗೆ ಕಾಳಜಿ ವಹಿಸದೇ ಸಮರ್ಪಕವಾದ ಮತ್ತು ಅಗತ್ಯವಾದ ಮುಂಜಾಗ್ರತಾ ಕ್ರಮವನ್ನು ಕೈಗೊಂಡಿಲ್ಲ ಎಂಬುದು ಸಾಬೀತಾಗಿರುತ್ತದೆ.

ಈ ಪ್ರಾಧಿಕಾರಕ್ಕೆ ದಿನಾಂಕ:16-3-02 ರಂದು ಒಪ್ಪಿಸಿದ ಕರಾರಿನ ಪತ್ರದಂತೆ ಮದ್ರಾಸ್ ಫೈನಾನ್ಸ್‌ರವರಲ್ಲಿ ಬಾಕಿ ಇತ್ತೆಂದು ಇದ್ದು, ಅರ್ಜಿದಾರರು ಈ ಪ್ರಾಧಿಕಾರದಲ್ಲಿ ದಿನಾಂಕ:9-1-03 ರಲ್ಲಿ ನೀಡಿದ ಸಾಕ್ಷ್ಯದಲ್ಲಿ ಹಿರಣ್ಣಯ್ಯ ಫೈನಾನ್ಸ್, ಎನ್‌ಟಿ ರಸ್ತೆ, ಶಿವಮೊಗ್ಗ ಎಂದು

ತಿಳಿಸಿರುತ್ತಾರೆ. ಇದರಿಂದ ಅರ್ಜಿದಾರರ ಮತ್ತು ಆಪಾದಿತ ಅರವಿಂದ ಇವರ ನಡುವಿನ ಜಂಟಿ ಒಪ್ಪಂದದ ವಿಚಾರದ ಬಗ್ಗೆ ಸಂಶಯಾಸ್ಪದವಾಗಿದೆ.

ಅಲ್ಲದೇ ಸಾಕ್ಷ್ಯದಲ್ಲಿ 30,000-00 ಚೆಕ್ ಪಡೆದಿರುವುದಾಗಿ ತಿಳಿಸಿದ್ದು ಚೆಕ್‌ಅನ್ನು ಬ್ಯಾಂಕಿಗೆ ಹಾಜರುಪಡಿಸಿ ನಗದೀಕರಣವಾಗಿಲ್ಲದ ನಂತರ ನ್ಯಾಯಾಲಯದಲ್ಲಿ ಅರವಿಂದ ಈತನ ವಿರುದ್ಧ ಯಾವುದೇ ವ್ಯಾಜ್ಯ ಹೂಡಿ ಕಾನೂನು ರೀತ್ಯಾ ಕ್ರಮ ಕೈಗೊಂಡಿರುವುದಿಲ್ಲ. ಇದೂ ಕೂಡ ಸಂಶಯಾಸ್ಪದವಾಗಿದೆ.

ವಾಹನವನ್ನು ಮಾರಾಟ ಮಾಡುವ ಸಂಬಂಧ ದಿನಾಂಕ:14-06-01 ರಂದು ಮಾಡಿದ ಕರಾರಿನಲ್ಲಿ ಸಾಕ್ಷಿ ಹಾಕಿಸಿಕೊಂಡವರ ಪೂರ್ಣ ಹೆಸರು ವಿಳಾಸವನ್ನು ಬರೆದಿರುವುದಿಲ್ಲ. ಇದರಿಂದ ಕರಾರು ಪತ್ರ ಉದ್ದೇಶಪೂರ್ವಕವಾಗಿ ಸೃಷ್ಟಿ ಮಾಡಿದ್ದು ಎಂಬುದಾಗಿ ತಿಳಿಯುತ್ತದೆ. ಸೃಷ್ಟಿ ಮಾಡಿದ್ದು ಅಲ್ಲ ಕರಾರು ಪತ್ರದಲ್ಲಿ ನೀಡಿರುವ ಸಂಗತಿ ಸತ್ಯವಾಗಿದ್ದು ಎನ್ನುವ ಅಂಶವನ್ನು ಪುಷ್ಟೀಕರಿಸುವಂತಹ ಕುರಿತು ಅರ್ಜಿದಾರರು ಸಾಕ್ಷಿದಾರರನ್ನು ಸಾಕ್ಷಿಯನ್ನಾಗಿ ಮಾಡಿ ವಿಚಾರಿಸಬಹುದಾಗಿತ್ತು. ವಿಚಾರಣೆ ಮಾಡದೇ ಇರುವುದು ಪ್ರಮುಖ ಲೋಪವೆಂದು ತಿಳಿಯಬಹುದು. ಹಾಗೂ ಮಾಲೀಕರು ಸಹ ಈ ಕೃತ್ಯಕ್ಕೆ ಏಕೆ ಭಾಗಿಯಾಗಿರಬಾರದು? ಎಂಬ ಸಂದೇಹವನ್ನುಂಟು ಮಾಡುತ್ತದೆ.

ಕರ್ನಾಟಕ ಉಚ್ಛ ನ್ಯಾಯಾಲಯದ ಪ್ರಕಟಿತ ತೀರ್ಪು ಐಎಲ್ಆರ್ 1985ರ ಪುಟ 2571 ರಲ್ಲಿ ರಮೇಶ್ ದೀಕ್ಷಿತ್ ಇವರ ವಿರುದ್ಧ ಕರ್ನಾಟಕ ರಾಜ್ಯ ಇವರಲ್ಲಿ ತಿಳಿಸಿದ ಪ್ರಕಾರ ಅರ್ಜಿದಾರರು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ ಹಾಗೂ ಈ ಕೇಸಿನಲ್ಲಿ ಶಾಮಿಲಾಗಿಲ್ಲ ಎಂಬುದರ ಬಗ್ಗೆ ರುಜುವಾತುಪಡಿಸಿರುವುದಿಲ್ಲ. ಹಾಗೂ ವಾಹನದ ಮಾಲೀಕರು ವಾಹನದ ಬಗ್ಗೆ ಆರೋಪಿಯಾಗಿರುವ ಅರವಿಂದ ಇವನು ಹಣ ಪಾವತಿ ಮಾಡದೇ ಇದ್ದಾಗ ಕರಾರು ಒಪ್ಪಂದದಂತೆ ಅರ್ಜಿದಾರರು ಅರವಿಂದ ಈತನ ಮೇಲೆ ಯಾವುದೇ ಕಾನೂನು ಕ್ರಮ ಜರುಗಿಸದೇ ಇರುವುದು ಕಂಡುಬಂದಿದ್ದು ಅಪರೋಕ್ಷಕವಾಗಿ ಅರ್ಜಿದಾರರು ಅರವಿಂದ ಇವರೊಡನೆ ಶ್ರೀಗಂಧದ ಕಳ್ಳ ಸಾಗಾಣಿಕೆಗೆ ಬೆಂಬಲ ನೀಡುತ್ತಿದ್ದಾರೆ ಎಂಬ ಸಂಶಯ ಉದ್ಭವಿಸುತ್ತದೆ. ಮತ್ತು ಅರ್ಜಿದಾರರು ಸಮರ್ಪಕವಾದ ಮತ್ತು ಅಗತ್ಯವಾದ ಮುಂಜಾಗ್ರತೆಯನ್ನು ಕೈಗೊಂಡಿಲ್ಲ ಎಂದು ಪೂರ್ಣವಾಗಿ ಸಾಬೀತಾಗಿರುತ್ತದೆ.

ಮೇಲ್ಕಂಡ ಎಲ್ಲಾ ಸಾಕ್ಷ್ಯ ಹಾಗೂ ದಾಖಲಾತಿಯಿಂದ ಅರ್ಜಿದಾರರು ತನ್ನ ಜವಾಬ್ದಾರಿಯನ್ನು ಸಿದ್ದಗೊಳಿಸುವಲ್ಲಿ ವಿಫಲನಾಗಿದ್ದರಿಂದ, ಈ ಮೇಲಿನ ಕಾರಣಗಳಿಂದ ಪರಿಶೀಲನಾಂಶ 3ಕ್ಕೆ ನಾನು ನಕಾರಾತ್ಮಕವಾಗಿ ಪರಿಗಣಿಸಿ, ಪರೀಲನಾಂಶ 4ಕ್ಕೆ ಈ ಕೆಳಗಿನಂತೆ ಆದೇಶಿಸಿದ್ದೇನೆ.

**ಆದೇಶ**

**ಸಂಖ್ಯೆ:ಎ1:71ಎ:ಅಮೊ:42:2001-02, ದಿನಾಂಕ: 11ನೇ ಸೆಪ್ಟೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಪ್ರಕಾರ ಪ್ರದತ್ತವಾದ ಅಧಿಕಾರದಂತೆ ವಾಹನ ನೊಂದಣಿ ಸಂಖ್ಯೆ:ಸಿ.ಆರ್.ಡಬ್ಲ್ಯೂ-9957 ಅಂಬಾಸೇಡರ್ ಕಾರು, ಛಾಸ್ಸಿ ಸಂಖ್ಯೆ:597108 ಇಂಜಿನ್ ಸಂಖ್ಯೆ:44455 ಮತ್ತು ಅದರಲ್ಲಿದ್ದ ಒಟ್ಟು 48 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರು ಮಾಡುವಂತೆ ಆದೇಶಿಸಿದ್ದೇನೆ.

ಆದೇಶವು ಈ ದಿನ ಅಂದರೆ ದಿನಾಂಕ:11-09-03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸಗಳ ಅವಧಿಯೊಳಗಡೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ.

ಈ ಆದೇಶವು ದಿನಾಂಕ:11-09-03 ರಂದು ನನ್ನ ಆದೇಶದಂತೆ ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ,

ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅನುಬಂಧ-1**

ಅಭಿಯೋಜನಾ ಪರ ಸಾಕ್ಷಿಗಳು

| | | |
|---|---|---|
| 1) ಶ್ರೀ ಎಂ.ಎನ್. ವಿಜಯಕುಮಾರ್, | ಸ.ಅ.ಸಂ. | ಪಿಡಬ್ಲ್ಯೂ-1 |

ಅಭಿಯೋಜನಾ ಪರ ನಿಶಾನೆಗಳು

| | |
|---|---|
| 1) ಸ್ಥಳ ಮಹಜರ್ | ನಿಶಾನೆ-ಪಿ1 |
| 2) ಪ್ರಥಮ ವರ್ತಮಾನ ವರದಿ | ನಿಶಾನೆ-ಪಿ2 |
| 3) ಅಮಾನತ್ತು ವರದಿ | ನಿಶಾನೆ-ಪಿ3 |
| 4) ಮೇಲಾಧಿಕಾರಿಗಳವರಿಗೆ ವಾಹನ ಮತ್ತು ಸ್ವತ್ತು ಒಪ್ಪಿಸಿದ ವರದಿ | ನಿಶಾನೆ-ಪಿ4 |
| 5) ಶ್ರೀಗಂಧ ದೃಢೀಕರಣ ಪತ್ರ | ನಿಶಾನೆ-ಪಿ5 |
| 6) ಒಂದು ಅಂಬಾಸೇಡರ್ ಕಾರು ಸಿಆರ್‌ಡಬ್ಲ್ಯೂ-9957 | ಎಂಒ-1 |
| 7) ಶ್ರೀಗಂಧದ ತುಂಡುಗಳು | ಎಂಒ-2 ರಿಂದ 17 |

ಅನುಬಂಧ-2

ಅರ್ಜಿದಾರರ ಪರ ಸಾಕ್ಷಿಗಳು

1) ಬಾಲಸುಬ್ರಮಣ್ಯಂ ಡಿಡಬ್ಲ್ಯೂ-1

ಅರ್ಜಿದಾರರ ಪರ ನಿಶಾನೆಗಳು

1) ವಾಹನ ಅಂಬಾಸೇಡರ್ ಕಾರು ಸಂಖ್ಯೆ:ಸಿಆರ್‌ಡಬ್ಲ್ಯೂ-9957 ಆರ್ ಸಿ ಪುಸ್ತಕದ ನಕಲು ನಿಶಾನೆ-ಡಿ1

2) ಜಂಟಿ ಒಪ್ಪಂದ ಪತ್ರದ ನಕಲು. ನಿಶಾನೆ-ಡಿ2.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 791 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು** : ಕೆ. ಲೋಕನಾಥಶೆಟ್ಟಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಫಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು** : ಇಲ್ಲಾ.

**ಪ್ರಕರಣದ ಮುಖ್ಯಾಂಶಗಳು**

ದಿನಾಂಕ: 30-8-03 ರಂದು ಒಂದು ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿ.ಟಿ.ಕ್ಯೂ:4683 ರಲ್ಲಿ ಒಟ್ಟು 84 ಕೆ.ಜಿ. ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ ತಾಲ್ಲೂಕು ಮುದುವಾಲದ ಬಳಿ ಇರುವ ನೀಲಗಿರಿ ತೋಪಿನ ಕೆರೆ ಬಳಿಯಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿದಳದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು, ಪಂಚನಾಮೆ ಕ್ರಮ ಜರುಗಿಸಿ, ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:26:03-04ನ್ನು ದಾಖಲು ಮಾಡಿಕೊಂಡು ವಾಹನ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿಟಿಕ್ಯೂ:4683 ಇಂಜಿನ್ ನಂ. 6 ಇಹೆಚ್‌ಓ 35037 ಛಾಸ್ಸಿ ನಂ. 111-548277 ಡಿಸೇಲ್ ಡಿಎಕ್ಸ್ ಎಂದಿರುತ್ತದೆಂದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿ ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶಗಳನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:13-9-03ರ ಛಾಯ್ಸ್ ಆಫ್ ಶಿವಮೊಗ್ಗ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ:15-9-03ರ ನಾವಿಕ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ 25 ಸೆಪ್ಟೆಂಬರ್ 2003ರ ಭಾಗ-3 ಪುಟಸಂಖ್ಯೆ: 1360ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರಲ್ಲಿ ಪತ್ರ ವ್ಯವಹರಿಸಿದಾಗ, ವಾಹನದ ಬಿ ವರದಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ, ಸಿಟಿಕ್ಯೂ-4683 ವಾಹನದ ಬಿ ವರದಿಯಾಗಿದ್ದು, ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳನ್ನು ಪರಿಶೀಲಿಸಿದಾಗ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಇಂಜಿನ್ ನಂಬರ್ ಹಾಗೂ ಬಿ ವರದಿಯಲ್ಲಿ ನಮೂದಿಸಿದ ಇಂಜಿನ್ ನಂಬರ್‌ಗಳು ತಾಳೆಯಾಗಿರುವುದಿಲ್ಲ. ಅದರ ಛಾಸ್ಸಿ ನಂಬರ್ ಮಾತ್ರ ತಾಳೆ ಹೊಂದುತ್ತದೆ. ಮುಂದುವರಿದು ಬಿ ವರದಿಯಂತೆ ವಾಹನವು ದಿನಾಂಕ:14-12-2000 ರಿಂದ ಹೆಚ್.ಎನ್. ಮೇಘರಾಜ್, ಬಿನ್ ನಿಜಲಿಂಗಯ್ಯ ಮೂರನೇ ಕ್ರಾಸ್, ಮುಖ್ಯರಸ್ತೆ, ಶಿವಮೊಗ್ಗ ಎಂಬುವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿದನ್ವಯ ಈ ಪ್ರಾಧಿಕಾರದಿಂದ ದಿನಾಂಕ:23-09-03 ರಂದು ಹೆಚ್.ಎನ್. ಮೇಘರಾಜ್ ಇವರಿಗೆ ಕಾರಣ ಕೇಳುವ ಪತ್ರವನ್ನು ಜಾರಿ ಮಾಡಿದಾಗ, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ, ಅಲ್ಲದೇ ಪ್ರಕಟಣೆಯಂತೆ 30 ದಿವಸದೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು

ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮ ಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತಾವರಣ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬಾರದೇ ಇರುವುದರಿಂದ, ಇನ್ನು ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:30-8-03 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಾಹನವನ್ನು ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿ, ಸದರಿ ದಾಖಲಾತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:30-08-03 ರಂದು ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ: ಸಿಟಿಕ್ಯೂ:4683 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

**ಸಂಖ್ಯೆ:ಎ1:ಅಸಂದ:ಅಮೊ:26:03-04, ದಿನಾಂಕ: 22ನೇ ಜನವರಿ 2004**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ರಂತೆ ಪ್ರದತ್ತವಾದ ಅಧಿಕಾರದಂತೆ ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸೇಡರ್ ಕಾರು ನೊಂದಣಿ ಸಂಖ್ಯೆ:ಸಿ.ಟಿ.ಕ್ಯೂ.:4683 ಇಂಜಿನ್ ನಂ. 6 ಇಹೆಚ್‌ಓ.35037, ಛಾಸ್ಸಿ ನಂ.111-548277 ಡಿಸೇಲ್ ಡಿಎಕ್ಸ್ ಮತ್ತು 84 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:22-01-04 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ, ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:22-01-04 ರಂದು ಬೆರಳಚ್ಚು ಮಾಡಿಸಿ, ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 792

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ ಅಂತಿಮ ಆದೇಶ**

**ವಿಷಯ:** ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** ಕರ್ನಾಟಕ ಅರಣ್ಯ ಕಾಯ್ದೆ 1963ರ ಕಾಲಂ 71ಎ ಪ್ರಕಾರ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಈ ನ್ಯಾಯಾಲಯದಿಂದ ಹೊರಡಿಸಿದ್ದ ಆದೇಶ ಸಂಖ್ಯೆ:ಬಿ1-71ಎ-ಸಿಆರ್-1/2003-04 ದಿನಾಂಕ 12.08.2003.

**ಪ್ರಸ್ತಾವನೆ:**

ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸಲುವಾಗಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಕಾಲಂ 71ಎ ಯಿಂದ 71 ಜಿ ಯವರೆಗೆ ಅನುಗುಣವಾಗಿ ಈ ನ್ಯಾಯಾಲಯದಲ್ಲಿ ನಡವಳಿಕೆಗಳನ್ನು ನಡೆಸಿ ದಿನಾಂಕ 24.03.2004 ರಂದು ಆದೇಶ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳನ್ನು ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಚನೆ ಹೊರಡಿಸಲಾಗಿತ್ತು. ಈ ಕೆಳಕಂಡ ವಾಹನಗಳ ಮತ್ತು ಶ್ರೀಗಂಧದ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆ ರುಜುವಾತುಪಡಿಸಲು ಅಪೇಕ್ಷಿಸಿದ ವ್ಯಕ್ತಿಯು ದಿನಾಂಕ 24.03.2004ರ ಪ್ರಕಟಣೆಯ ಮೂವತ್ತು ದಿನಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ಅವರ ಹಕ್ಕು ಬಾಧ್ಯತೆ ಮತ್ತು ಮಾಲೀಕತ್ವವನ್ನು ರುಜುವಾತುಪಡಿಸಲು ತಿಳಿಸಲಾಗಿತ್ತು ಸದರಿ ಪ್ರಕಟಣೆ ಪ್ರಕಟಗೊಂಡ ಮೂವತ್ತು ದಿನಗಳೊಳಗಾಗಿ ಯಾವುದೇ ಅಹವಾಲು ಇಲ್ಲವಾದಲ್ಲಿ ಸರ್ಕಾರದ ಪರವಾಗಿ ಸದರಿ ವಾಹನ ಮತ್ತು ಶ್ರೀಗಂಧವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ಸಹ ತಿಳಿಸಲಾಗಿತ್ತು. ಈ ಆದೇಶವನ್ನು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ

ದಿನಾಂಕ 25.03.2004 ರಂದು ಪುಟ ಸಂಖ್ಯೆ 1 ಮತ್ತು 2 ರಲ್ಲಿ ಪ್ರಕಟಿಸಲಾಗಿದೆ. ದಿನಾಂಕ 6.4.2004ರ ಶಿವಮೊಗ್ಗದ ನಾವಿಕ ಮತ್ತು 8-4-2004ರ ಶಿವಮೊಗ್ಗದ ಟೈಮ್ಸ್ ಪತ್ರಿಕೆಯಲ್ಲಿ ಸಹ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

ಮೇಲ್ಕಂಡ ದಿನಾಂಕ 24.03.2004ರ ಪ್ರಕಟಣೆ ಪ್ರಕಟಗೊಂಡ ದಿನಾಂಕದಿಂದ ಇಲ್ಲಿಯವರೆವಿಗೂ ಯಾವುದೇ ಅಹವಾಲುಗಳು ಬಂದಿಲ್ಲ ಮತ್ತು ಯಾರೊಬ್ಬರೂ ಇದುವರೆವಿಗೂ ಈ ಕೆಳಕಂಡ ವಾಹನ ಮತ್ತು ಶ್ರೀಗಂಧವನ್ನು ತಮ್ಮದೆಂದು ರುಜುವಾತುಪಡಿಸಲು ಈ ನ್ಯಾಯಾಲಯಕ್ಕೆ ಹಾಜರಾಗಿರುವುದಿಲ್ಲ ಸದರಿ ವಾಹನದ ವಾರಸುದಾರರು ಈ ಅರಣ್ಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ರುಜುವಾತು ಪಡಿಸಿರುವುದಿಲ್ಲ.

**ಆದೇಶ**

**ಸಂಖ್ಯೆ: ಬಿ1-71ಎ-ಸಿಆರ್-1/04-05, ದಿನಾಂಕ: 21ನೇ ಮೇ 2004**

ಆದ್ದರಿಂದ ಕರ್ನಾಟಕ ಅರಣ್ಯ ಕಾಯ್ದೆ 1963 ಕಾಲಂ 71ಎ ಪ್ರಕಾರ ಈ ಕೆಳಕಂಡ ವಾಹನಗಳು ಮತ್ತು ಶ್ರೀಗಂಧವನ್ನು ಈ ಆದೇಶದ ಮೂಲಕ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಈ ಆದೇಶದನ್ವಯ ಈ ಕೆಳಕಂಡ ವಾಹನ ಹಾಗೂ ಶ್ರೀಗಂಧದ ಪ್ರಮಾಣದ ಮೇಲೆ ಈ ದಿನದಿಂದ ಯಾವುದೇ ವ್ಯಕ್ತಿಗೆ ಯಾವುದೇ ರೀತಿಯ ಹಕ್ಕು ಇರುವುದಿಲ್ಲ ಎಂದು ಈ ಮೂಲಕ ಘೋಷಿಸಲಾಗಿದೆ.

| ಕ್ರ. ಸಂ. | ಅರಣ್ಯ ಮೊಕದ್ದಮೆ/ಪೊಲೀಸ್ ಕ್ರೈಂ ಸಂಖ್ಯೆ | ವಾಹನಗಳ ಮಾದರಿ ಮತ್ತು ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸಿಸ್ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| | | **ಶಂಕರ್ ವಲಯ, ಶಿವಮೊಗ್ಗ** | | |
| 1. | 106/02-03 | ಟಿ.ವಿ.ಎಸ್ ಮೋಪೆಡ್ ನಂ ಸಿಟಿಎ-6211 | ಕಾಣುತ್ತಿಲ್ಲ | ಕಾಣುತ್ತಿಲ್ಲ |
| 2. | 117/02-03 | ಮಾರುತಿ 800 ಕಾರ್ ನಂ. ಕೆಎ-19-ಎಂ-6972 | 182208 | 104192 |
| 3. | 139/02-03 | ಬಜಾಜ್ ಸ್ಕೂಟರ್ ನಂ-ಸಿಎನ್ಎಸ್-8100 | 05E8211-179354 | 05C-8211-146524 |
| 4. | 79/03-04 | ಹೀರೋ ಹೊಂಡಾ ಮೋಟಾರ್ ಬೈಕ್ ನಂ. ಕೆಎ-14-ಹೆಚ್-3698 | 94-H-17-E-01481 | 94-H-17C-01391 |
| 5. | ದೊಡ್ಡಪೇಟೆ ಪೊಲೀಸ್ ಕ್ರೈಂ ನಂ.148/03 | ಬಜಾಜ್ ಎಂ-80 ಸ್ಕೂಟರ್ ನಂ. ಕೆಎ-18-ಜೆ-2900 | 16EGGG81702 | 16EGGG-81702 |
| 6. | 119/02-03 | ಲೂನಾ ಮೋಪೆಡ್ ನಂ. ಕೆಎ-14-ಹೆಚ್-4198 | 94J03018053 | 94J0301988 |
| | | **ಮಂಡಗಡ್ಡೆ ವಲಯ** | | |
| 7. | 36/03-04 | ಬಜಾಜ್ ಎಂ-80 ಸ್ಕೂಟರ್ ನಂ. ಕೆಎ-14-ಇ-3392 | E-16-BM-030717 | C16-BM-030738 |
| 8. | 40/03-04 | ಫಿಯೆಟ್ ಕಾರ್ ನಂ. ಎಂಇವಿ-5189 | ಕಾಣುತ್ತಿಲ್ಲ | ಕಾಣುತ್ತಿಲ್ಲ |
| 9. | 45/03-04 | ಬಜಾಜ್ ಸ್ಕೂಟರ್ ನಂ. ಸಿಟಿಯು-2705 | 04B-323904 | 510114 |
| 10. | 47/03-04 | ಮಾರುತಿ 800 ಕಾರ್ ನಂ. ಕೆಎ-36-ಎಂ-3636 | 1N-829884 | 555472 |
| 11. | 59/03-04 | ಸುಜುಕಿ ಮೋಟಾರ್ ಬೈಕ್ ನಂ. ಕೆಎ-14-ಜೆ-2639 | 1808-M-729839 | 1608F684707 |
| 12. | 62/03-04 | ಆಟೋರಿಕ್ಷಾ ನಂ. ಎಂಇಜಿ-6610 | 175C1031919 | ಕಾಣುತ್ತಿಲ್ಲ. |
| 13. | 70/03-04 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆಎ-14-ಹೆಚ್-8395 | 08E-970689 | 06C-934498 |
| 14. | 73/03-04 | ಬಜಾಜ್ ಚೇತಕ್ ಸ್ಕೂಟರ್ ನಂ. ಕೆಎ-14-ಜೆ-4087 | 35M-96L-43173 | 06F96L20361 |
| 15. | 75/03-04 | ಎಲ್ಎಂಎಲ್ ಸ್ಕೂಟರ್ ನಂ. ಕೆಎ-19-ಹೆಚ್-6121 | 2180006 | ಕಾಣುತ್ತಿಲ್ಲ |
| 16. | 76/03-04 | ಮಾರುತಿ ವ್ಯಾನ್ ನಂ. ಕೆಎ-03-ಎಂ-2692 | F8BIN-461157 | ST91-IN-822591 |
| 17. | 58/03-04 | ಬಜಾಜ್ ಸ್ಕೂಟರ್ ನಂ. ಕೆಎ-14-ಜೆ-1587 | E01KC429708 | CIKC435905 |
| 18. | 46/03-04 | ಸುಜುಕಿ ಮೋಟಾರ್ ಬೈಕ್ ನಂ. ಸಿಕೆಇ-9246 | 2810M197483 | 2810F190681 |

| 1 | 2 | 3 | 4 | 5 |
|---|---|---|---|---|
| | | ಆಯನೂರು ವಲಯ | | |
| 19. | 80/03-04 | ಸುಜುಕಿ ಮೋಟಾರ್ ಬೈಕ್ ನಂ. ಕೆಎ-15-ಇ-7453 | 1707M887530 | 1707F841544 |
| 20. | 81/03-04 | ಹೀರೋಹೊಂಡಾ ಮೋಟಾರ್ ಬೈಕ್ ನಂ. ಸಿಟಿಕ್ಯೂ-4669 | 98F10E-12892 | ಕಾಣುತ್ತಿಲ್ಲ |
| 21. | 88/03-04 | ಹೀರೋಹೊಂಡಾ ಮೋಟಾರ್ ಬೈಕ್ ನಂ. ಕೆಎ-06-ಇ-943 | E10E356509 | ಕಾಣುತ್ತಿಲ್ಲ |
| 22. | 92/03-04 | ಹೀರೋಹೊಂಡಾ ಮೋಟಾರ್ ಬೈಕ್ ನಂ. ಕೆಎ-15-ಇ-4412 | ಕಾಣುತ್ತಿಲ್ಲ | ಕಾಣುತ್ತಿಲ್ಲ |
| | | ತೀರ್ಥಹಳ್ಳಿ ವಲಯ | | |
| 23. | 34/03-04 | ಲಾರಿ ನಂ. ಎಂವೈವೈ-6516 | 866 | HE-344730335 |
| 24. | 40/03-04 | ರಾಜಧೂತ್ ಮೋಟಾರ್ ಬೈಕ್ ನಂ. ಸಿಟಿಎಸ್-1225 | 627995 | 830988 |
| 25. | 62/03-04 | ಫಿಯೆಟ್ ಕಾರ್ ನಂ. ಎಂವೈಡಬ್ಲ್ಯೂ-3843 | ಕಾಣುತ್ತಿಲ್ಲ | ಕಾಣುತ್ತಿಲ್ಲ |

**ಜಿ. ಜಯರಾಮಯ್ಯ**

ಪಿ.ಆರ್. 793 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ:ಕಾನಪ:ಪ್ರ:F-8/04, ದಿನಾಂಕ: 24ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಭಾರತಮ್ಮ ಕೋಂ. ಲೇಟ್ ಬಸಣ್ಣ
2. ಶ್ರೀನಿವಾಸ S/o ಲೇಟ್ ಬಸಣ್ಣ
3. ಜಯರಾಂ S/o ಲೇಟ್ ಬಸಣ್ಣ
4. ಪುನಿತ್ S/o ಲೇಟ್ ಬಸಣ್ಣ
   ಎಲ್ಲರೂ ವಾಸ ಚಿಕ್ಕಮಧುರೆ

ಪ್ರತಿವಾದಿಗಳು:

1. ಚಿತ್ರದುರ್ಗ ಸನ್ ಫ್ಲವರ್ ಆಯಿಲ್ ಇಂಡಸ್ಟ್ರೀಸ್ ಬೆಂಗಳೂರು ರೋಡ್, ಚಳ್ಳಕೆರೆ.
2. ನ್ಯಾಷನಲ್ ಇನ್ ಕಂ. ಲಿ., ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಭಾರತಮ್ಮ, ಶ್ರೀನಿವಾಸ, ಜಯರಾಂ, ಪುನೀತ್ ಇವರು, ತಾವು ಮೃತ ಬಸಣ್ಣ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸಣ್ಣ ಇವರು ಒಂದನೇ ಪ್ರತಿವಾದಿಗಳಾದ ಚಿತ್ರದುರ್ಗ ಸನ್ ಫ್ಲವರ್ ಆಯಿಲ್ ಇಂಡಸ್ಟ್ರೀಸ್ ಇವರಲ್ಲಿ ಹೆಲ್ಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 795 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ:ಕಾನಪ:ಪ್ರ:F-9/04, ದಿನಾಂಕ: 24ನೇ ಮೇ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಅನುಸೂಯ ಕೋಂ ಲೇ. ತಿಮ್ಮರಾಜು
2. ನಾಗವೇಣಿ D/o ಲೇಟ್ ತಿಮ್ಮರಾಜು
3. ಶಾಂತಿ D/o ಲೇಟ್ ತಿಮ್ಮರಾಜು
   ವಾಸ: ಕಲ್ಯಾಣ ದುರ್ಗ

ಪ್ರತಿವಾದಿಗಳು:

1. P. ಸುಜಾತ ವಾಹನ ಮಾಲೀಕರು ಕಲ್ಯಾಣ ದುರ್ಗ
2. ನ್ಯಾಷನಲ್ ಇನ್ ಕಂ.ಲಿ., ಕಲ್ಯಾಣ ದುರ್ಗ
3. ನೀಮಕಲ್ಲಪ್ಪ ಕಲ್ಯಾಣ ದುರ್ಗ

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಅನುಸೂಯ, ನಾಗವೇಣಿ, ಶಾಂತಿ ಇವರು, ತಾವು ಮೃತ ತಿಮ್ಮರಾಜು ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತಿಮ್ಮರಾಜು ಇವರು

ಒಂದನೇ ಪ್ರತಿವಾದಿಗಳಾದ ಸುಜಾತ P. ಇವರಲ್ಲಿ "ಕ್ಲೀನರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಜಿ. ಗೋವಿಂದಯ್ಯ
ಪಿ.ಆರ್. 796 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಸ್:12841:2003-04, ದಿನಾಂಕ: 24ನೇ ಮೇ 2004**

| ವಾದಿ | ಪ್ರತಿವಾದಿಗಳು |
|---|---|
| ವ್ಯವಸ್ಥಾಪಕ ನಿರ್ದೇಶಕರು, | ಪ್ರಧಾನ ವ್ಯವಸ್ಥಾಪಕರು, |
| ಚಿತ್ರದುರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, | ದಿ. ಹಿರಿಯೂರು ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, |
| ಚಿತ್ರದುರ್ಗ | ಹಿರಿಯೂರು, ಚಿತ್ರದುರ್ಗ ಜಿಲ್ಲೆ. |

### 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.82,58,859-00 ಗಳನ್ನು ದಿನಾಂಕ:23-10-2003 ರಿಂದ ಶೇಕಡಾ 17 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ.ಜೆಆರ್‌ಬಿ:ಡಿಸ್:12841:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ. ಹಾಗೂ ಈ ಪ್ರಕರಣವನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ ಇವರಿಗೆ ವಹಿಸಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಯಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ:ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.82,58,859-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:18-6-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ

ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಚಿತ್ರದುರ್ಗ ಜಿಲ್ಲೆ ಹಿರಿಯೂರು ಟೌನ್‌ನಲ್ಲಿ ಅಸೆಸ್‌ಮೆಂಟ್ ನಂ.1053/1, ಅಪಾರ್ಟ್‌ಮೆಂಟ್ ನಂ.212 ಆಗಿರುವ 211.5 ಅಡಿ x 72 ಅಳತೆಯ ನಿವೇಶನ ಮತ್ತು ಸದರಿ ನಿವೇಶನದಲ್ಲಿ ಕಟ್ಟಿರುವ ಗ್ರೌಂಡ್ ಫ್ಲೋರ್ ಮತ್ತು I ಮತ್ತು IIನೇ ಫ್ಲೋರ್ ಕಟ್ಟಡ ಇತ್ಯಾದಿ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಮುನಿಸಿಪಲ್ ರೋಡ್

ಪಶ್ಚಿಮಕ್ಕೆ : ರತನ್‌ದೀಪ್ ಬಿಲ್ಡಿಂಗ್

ಉತ್ತರಕ್ಕೆ : ಶ್ರೀ ತಿಪ್ಪೇಸ್ವಾಮಿಶೆಟ್ಟಿಯ ಕಟ್ಟಡ

ದಕ್ಷಿಣಕ್ಕೆ : ಕನ್ಸರ್‌ವೆನ್ಸಿ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 24-5-2004 ರಂದು ನೀಡಿರುತ್ತೇನೆ.

ಬಸವೇಗೌಡ

ಪಿ.ಆರ್. 797 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ**

**ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಕಛೇರಿ, ಬೆಂಗಳೂರು**

**ವಿಷಯ:** ಶ್ರೀ ಎನ್.ಆರ್. ಸ್ವಾಮಿ, ದ್ವಿತೀಯ ದರ್ಜೆ ಸಹಾಯಕರು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ ಬೆಂಗಳೂರು, ಇವರ ಅನಧಿಕೃತ ಗೈರು ಹಾಜರಿ ವಿರುದ್ಧ ಶಿಸ್ತು ಕ್ರಮ - ಸೇವೆಯಿಂದ ವಜಾ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**

1. ಷೋಕಾಸ್ ನೋಟೀಸ್ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿ/03/2003-04 ದಿನಾಂಕ 6.6.2003.
2. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು, ಇವರ ಆದೇಶ ಸಂಖ್ಯೆ ಡಿಎಸ್‌ಕೆ/ಇಎಸ್‌ಟಿ/03/2003-04 ದಿನಾಂಕ 11.8.2003.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು, ಇವರ ವಿಚಾರಣಾ ವರದಿಯ ದಿ : 11.9.2003.
4. ಎನ್.ಆರ್. ಸ್ವಾಮಿ, ದ್ವಿ.ದ.ಸ. (ನಿಲಂಬನೆ) ಇವರು ಸಲ್ಲಿಸಿರುವ ಮುಚ್ಚಳಿಕೆ ಪತ್ರದ ದಿನಾಂಕ 12.9.2003.
5. ವಿಚಾರಣಾ ವರದಿಯೊಂದಿಗೆ ಜಾರಿಗೊಳಿಸಿದ ತಿಳುವಳಿಕೆ ಪತ್ರದ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿ/03/2003-04 ದಿನಾಂಕ 1.7.2004.
6. ನೌಕರರಿಗೆ ಹೊರಡಿಸಿದ ಅಂತಿಮ ನೋಟೀಸ್ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿ/03/2003-04 ದಿನಾಂಕ 3.3.2004.
7. ಸಂಜೆವಾಣಿಯಲ್ಲಿ ಪ್ರಕಟಣಾ ದಿನಾಂಕ 14.5.2004.

**ಪ್ರಸ್ತಾವನೆ:**

ಶ್ರೀ ಎನ್.ಆರ್.ಸ್ವಾಮಿ, ದ್ವಿತೀಯ ದರ್ಜೆಯ ಸಹಾಯಕ, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಕೇಂದ್ರ ಕಛೇರಿ, ಬೆಂಗಳೂರು, ಇವರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ (1)ರಲ್ಲಿ ಓದಲಾದ ಪತ್ರದ ಮೂಲಕ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರುರವರು ಆರೋಪಿತ ದ್ವಿತೀಯ ದರ್ಜೆಯ ಸಹಾಯಕರಿಗೆ ಜಾರಿ ಮಾಡಿ ವಿವರಣೆ ಸಲ್ಲಿಸುವಂತೆ ಕೋರಿದ್ದರು.

ಶ್ರೀ ಎನ್.ಆರ್. ಸ್ವಾಮಿ, ದ್ವಿತೀಯ ದರ್ಜೆಯ ಸಹಾಯಕರು, ಇವರು ಮೇಲ್ಕಂಡ ಕಾರಣ ಕೇಳುವ ನೋಟೀಸನ್ನು ದಿನಾಂಕ 16.6.2003ರಂದು ಸ್ವೀಕರಿಸಿದ್ದು, ಅದಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ದೋಷಾರೋಪಣೆಗಳೊಂದಿಗೆ ಹೊರಡಿಸಲಾದ ಕಾರಣ ಕೇಳುವ ನೋಟೀಸ್‌ಗೆ ಆರೋಪಿತ ದ್ವಿತೀಯ ದರ್ಜೆಯ ಸಹಾಯಕರು ಯಾವುದೇ ಪ್ರತಿಕ್ರಿಯೆ ನೀಡದೇ ಇದ್ದುದರಿಂದ ಅವರ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣೆಗೆ ವಹಿಸಿರುತ್ತಾರೆ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ, ಶ್ರೀ ಹೆಚ್. ಶಾಂತಕುಮಾರ್, ದ್ವಿತೀಯ ದರ್ಜೆಯ ಸಹಾಯಕರು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು, ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ವಿಚಾರಣೆಯಲ್ಲಿ ಪ್ರಕರಣವನ್ನು ಮಂಡಿಸಲು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಪ್ರಕರಣದಲ್ಲಿ ವಿಚಾರಣಾಧಿಕಾರಿಯಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು, ಇವರು ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (3)ರಲ್ಲಿ ಓದಲಾದ ಪತ್ರದ ಮೂಲಕ ಶಿಸ್ತು ಪ್ರಾಧಿಕಾರಿಯಾದ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು, ಇವರಿಗೆ ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣಾ ಸಮಯದಲ್ಲಿ ಶ್ರೀ ಎನ್.ಆರ್. ಸ್ವಾಮಿ, ದ್ವಿ.ದ.ಸ. ರವರು ಇಲಾಖಾ ವಿಚಾರಣೆಗೆ ಗೈರು

ಹಾಜರಾಗಿರುತ್ತಾರೆ. ವಿಚಾರಣಾಧಿಕಾರಿಯವರು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಗಮನಿಸಿರುತ್ತಾರೆ. ಆಪಾದಿತ ನೌಕರರ ವಿರುದ್ಧದ ಆರೋಪವು ಸಾಬೀತಾಗುತ್ತದೆಯೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ಆಪಾದಿತ ನೌಕರನು ಮೇಲೆ ಓದಲಾದ (4)ರಲ್ಲಿ ಇನ್ನು ಮುಂದೆ ಅನಧಿಕೃತ ಗೈರು ಹಾಜರಿಯಾಗುವುದಿಲ್ಲ ಎಂದು ಮುಚ್ಚಳಿಕೆ ನೀಡಿದ್ದಾಗ್ಯೂ ಅನಧಿಕೃತ ಗೈರು ಹಾಜರಿಯನ್ನು ಮುಂದುವರೆಸಿರುತ್ತಾರೆ.

ವಿಚಾರಣಾ ವರದಿಯನ್ನು ಅನುಸರಿಸಿ ಇಲಾಖೆಯು ಆಪಾದಿತ ನೌಕರನ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳುವ ಮೊದಲು ವಿಚಾರಣಾ ವರದಿಯ ಪ್ರತಿಯನ್ನು ಮೇಲೆ ಓದಲಾದ (5)ರಂತೆ ದಿನಾಂಕ 7.1.2004ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿನ ನಿಯಮಾನುಸಾರ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ/18/ಸೇಇವಿ/2001 ದಿನಾಂಕ 14.9.2001 ರನ್ವಯ ಮುಂದಿನ ಕ್ರಮ ಕೈಗೊಳ್ಳುವುದಾಗಿ ತಿಳಿಸಲಾಗಿತ್ತು. ಆಪಾದಿತ ನೌಕರರು ಈ ಕಾರಣ ಕೇಳಿ ನೋಟೀಸನ್ನು ಖುದ್ದಾಗಿ ದಿನಾಂಕ 20.1.2004ರಂದು ಪಡೆದಿದ್ದರೂ ಸಹ ಆಪಾದಿತ ನೌಕರನು ನಿಗದಿತ ಕಾಲಾವಧಿಯಲ್ಲಿ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ.

ಶ್ರೀ ಎನ್.ಆರ್.ಸ್ವಾಮಿ, ದ್ವಿತೀಯ ದರ್ಜೆಯ ಸಹಾಯಕ, ಇವರ ಅನಧಿಕೃತ ಗೈರು ಹಾಜರಿಗೆ ಸಂಬಂಧಿಸಿದಂತೆ ದಿನಾಂಕ 14.5.2004ರಂದು 'ಸಂಜೆವಾಣಿ' ಯಲ್ಲಿ ಪ್ರಕಟಣೆಯನ್ನು ನೀಡಲಾಗಿದೆ. ಆದಾಗ್ಯೂ ಆಪಾದಿತರು ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ.

ಶ್ರೀ ಎನ್.ಆರ್.ಸ್ವಾಮಿ, ದ್ವಿತೀಯ ದರ್ಜೆಯ ಸಹಾಯಕರು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು, ಇವರು ದಿನಾಂಕ 21.6.2001ರಿಂದ ದಿನಾಂಕ 3.3.2004ರಲ್ಲಿದ್ದಂತೆ ಒಟ್ಟು 345 ದಿನಗಳ ಅವಧಿಯಲ್ಲಿ "ಅನಧಿಕೃತ ಗೈರು ಹಾಜರಾಗಿರುತ್ತಾರೆ" ಇವರಿಗೆ ನೀಡಲಾದ ನೋಟೀಸ್‌ಗಳು ವಾಪಸ್ಸು ಬರುತ್ತಿದೆ. ಇವರು ಈ ಕಚೇರಿಗೆ ಇವರ ಗೈರು ಹಾಜರಾತಿಯ ಬಗ್ಗೆ ಯಾವುದೇ ಸೂಚನೆ ನೀಡುತ್ತಿಲ್ಲ. ಇವರ ಗೈರು ಹಾಜರಾತಿಯಿಂದ ಸಾರ್ವಜನಿಕರ ಹಿತಾಸಕ್ತಿಗೆ ಧಕ್ಕೆ ಬಂದಿದೆ. ಇವರನ್ನು ಸೇವೆಯಲ್ಲಿ ಮುಂದುವರಿಸುವುದರಿಂದ ಯಾವುದೇ ಪ್ರಯೋಜನ ಈ ಕಚೇರಿಗೆ ಇರುವುದಿಲ್ಲ, ದಿನಾಂಕ 4.3.2004 ರಿಂದ ಈ ತಹಲ್‌ವರೆವಿಗೂ ಆಪಾದಿತ ನೌಕರರು ಅನಧಿಕೃತ ಗೈರು ಹಾಜರಿಯಾಗಿರುತ್ತಾರೆ. ಈ ರೀತಿ ಅನಧಿಕೃತ ಗೈರು ಹಾಜರಾಗುವ ಮೂಲಕ ತೀವ್ರತರವಾದ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು - 1966ರ ನಿಯಮ 3(i)(iii)ರಂತೆ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು - 1957ರ ನಿಯಮ - 106ಎ ಉಲ್ಲಂಘಿಸಿರುವ ಆರೋಪವು ಸಾಬೀತಾಗುತ್ತದೆ. ಆಪಾದಿತ ನೌಕರ ಇಲಾಖಾ ವಿಚಾರಣೆ ಸಮಯದಲ್ಲಾಗಲೀ ಅಥವಾ ತದನಂತರ ಅವರಿಗೆ ನೀಡಲಾದ ಅವಕಾಶಗಳ ಸಂದರ್ಭದಲ್ಲಾಗಲೀ ಶಿಸ್ತು ಪ್ರಾಧಿಕಾರಕ್ಕೆ ಯಾವುದೇ ಪ್ರತಿಕ್ರಿಯೆ ಲಿಖಿತ ಹೇಳಿಕೆ ನೀಡದಿರುವುದರಿಂದ ಅವರ ಹೇಳಿಕೆ ಏನೂ ಇಲ್ಲವೆಂದು ಭಾವಿಸಿ ದಂಡನೆ ವಿಧಿಸಲು ಇಲಾಖೆಯು ತೀರ್ಮಾನಿಸಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿ/3/2003-04, ದಿನಾಂಕ: 26ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎನ್.ಆರ್. ಸ್ವಾಮಿ, ದ್ವಿತೀಯ ದರ್ಜೆಯ ಸಹಾಯಕರು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಕೇಂದ್ರ ಕಚೇರಿ, ಬೆಂಗಳೂರು, ಇವರ ವಿರುದ್ಧದ ಅನಧಿಕೃತ ಗೈರು ಹಾಜರಿಯ ಆರೋಪವು ಸಾಬೀತಾದ ಕಾರಣ ಸಾಬೀತಾದ ಆರೋಪದ ಗಂಭೀರತೆಗನುಗುಣವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii) ರಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿದೆ.

**ಬಿ.ಹೆಚ್. ಮಂಜುನಾಥ್**

ಪಿ.ಆರ್. 798 ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು.

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ**

**ಅಧಿಸೂಚನೆ**

**ಸಂಖ್ಯೆ:ತಾಸಕಅ:ಕಮಾಹಅ:2000-02, ಸಿಆರ್.2, 04-05, ದಿನಾಂಕ: 24ನೇ ಮೇ 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ.ಸಿಆಸುಇ.56:ಯೋಮಸ.02: (1) ದಿನಾಂಕ:18.7.2002.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯ, ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ, ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | | |
|---|---|---|
| ತಾಲ್ಲೂಕು ಮಟ್ಟದಲ್ಲಿ | ಸಕ್ಷಮ ಪ್ರಾಧಿಕಾರ:ಕಛೇರಿ ಅಧೀಕ್ಷಕರು | ಅಪೀಲು ಪ್ರಾಧಿಕಾರ:ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

1) ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತಿಯ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು - 1 ಹುದ್ದೆ
2) ಪ್ರಥಮ ದರ್ಜೆ ಸಹಾಯಕರು - 1 ಹುದ್ದೆ
3) ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
4) ಬೆರಳಚ್ಚುಗಾರರು - 1 ಹುದ್ದೆ
5) ಗ್ರೂಪ್ 'ಡಿ' ನೌಕರರು - 1 ಹುದ್ದೆ

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಡಿಯಲ್ಲಿ ಬರುವ ಸಂಸ್ಥೆಗಳ ಹೆಸರು ಮತ್ತು ವಿವರ.

| ಕ್ರ. ಸಂ. | ಸಂಸ್ಥೆಗಳ ಹೆಸರು | | ಸಂಖ್ಯಾಬಲ |
|---|---|---|---|
| 1) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೂಡ್ಲಿಗಿ | - | 160 |
| 2) | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಕೂಡ್ಲಿಗಿ | - | 50 |
| 3) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಗುಡೇಕೋಟೆ | - | 100 |
| 4) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೊಟ್ಟೂರು | - | 130 |
| 5) | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಕೊಟ್ಟೂರು | - | 50 |
| 6) | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಉಜ್ಜಿನಿ | - | 50 |
| 7) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಉಜ್ಜಿನಿ | - | 55 |
| 8) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಚಿರತಗುಂಡು | - | 50 |
| 9) | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸೂಲದಹಳ್ಳಿ | - | 50 |
| 10) | ಸರ್ಕಾರಿ ವಸತಿ ಶಾಲೆ ಕೂಡ್ಲಿಗಿ | - | 75 |
| 11) | ಮಹಿಳಾ ಕಲ್ಯಾಣ ಕೇಂದ್ರ ಮಲ್ಲನಾಯ್ಕನಹಳ್ಳಿ | - | 50 |
| 12) | ಮಹಿಳಾ ಕಲ್ಯಾಣ ಕೇಂದ್ರ ಚಿಕ್ಕಜೋಗಿಹಳ್ಳಿ | - | 50 |

ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಹಾಗೂ ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1. ಕಾನೂನು ಪದವೀಧರರಿಗೆ ಧನ ಸಹಾಯ
2. ನರ್ಸರಿ ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳು
3. ಕಟ್ಟಡಗಳ ನಿರ್ವಹಣೆ
4. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಶಿಷ್ಯವೇತನ
5. ಎಸ್.ಎಸ್.ಎಲ್.ಸಿ. ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ
6. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ
7. ಪ್ರತಿಭಾ ವಿದ್ಯಾರ್ಥಿವೇತನ
8. ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
9. ಪರಿಶಿಷ್ಟ ವರ್ಗದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ
10. ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯ
11. ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವ ಪೋಷಕರ ಮಕ್ಕಳಿಗೆ ಮೆ.ಪೂ.ವಿದ್ಯಾರ್ಥಿವೇತನ.
12. 1 ರಿಂದ 4ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ
13. ಅಸ್ಪೃಶ್ಯತಾ ನಿವಾರಣೆ
14. ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡದವರಿಗೆ ಪರಿಹಾರ
15. ಜಾತಿ ಪರಿಶೀಲನೆ
16. ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ
17. ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ
18. 6 ರಿಂದ 7 ಹಾಗೂ 8 ರಿಂದ 10ನೇ ವರ್ಗದ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಹೆಣ್ಣು ಮಕ್ಕಳಿಗೆ ಪ್ರೋತ್ಸಾಹ ಧನ.
19. ಅಂತರಜಾತಿ ವಿವಾಹವಾದ ದಂಪತಿಗಳಿಗೆ ಪ್ರೋತ್ಸಾಹ ಧನ.

2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯ ವಿಧಾನ.

ಮೇಲೆ ವಿವರಿಸಿರುವಂತೆ, ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಎಲ್ಲಾ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ತಾಲ್ಲೂಕು ಮಟ್ಟದಲ್ಲಿ ಸಂಬಂಧಿಸಿದ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಣಾ ಅಧಿಕಾರಿಗಳಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು : ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕರ್ತವ್ಯಗಳು**

1) ತಾಲ್ಲೂಕಿನ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಜನರ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

2) ಪ್ರತಿ ತಿಂಗಳು ಕನಿಷ್ಟ 15 ದಿನ ಪ್ರವಾಸ ಮಾಡುವುದು ಹಾಗೂ 10 ದಿನ ಹಳ್ಳಿಗಳಲ್ಲಿ ವಾಸ್ತವ್ಯ ಮಾಡುವುದು ಹಾಗೂ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಕಾಲೋನಿಗಳಿಗೆ ತಪ್ಪದೇ ಭೇಟಿ ನೀಡುವುದು.

3) ಇಲಾಖೆಯ ವಾರ್ಷಿಕ ಯೋಜನೆಯನ್ನು ತಯಾರಿಸಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರಿಂದ ಒಪ್ಪಿಗೆ ಪಡೆದು ಹಣ ಬಿಡುಗಡೆ ಮಾಡಿಸಿಕೊಳ್ಳುವುದು.

4) ತಾಲ್ಲೂಕಿನ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಮುಖ್ಯಸ್ಥರ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು ಹಾಗೂ ಕಾರ್ಯಾಲಯದ ಸಿಬ್ಬಂದಿಯವರ ಕೆಲಸಗಳನ್ನು ತಪಾಸಣೆ ಮಾಡುವುದು.

5) ಮೇಲಾಧಿಕಾರಿಗಳಿಗೆ ತಿಂಗಳ, 3 ತಿಂಗಳ, ಅರ್ಧ ವರ್ಷದ ಹಾಗೂ ವರ್ಷದಲ್ಲಿ ಸಾಧಿಸಿದ ಪ್ರಗತಿ ಪತ್ರಿಕೆಗಳನ್ನು ಸಲ್ಲಿಸುವುದು.

6) ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ತಿಂಗಳ ಖರ್ಚಿನ ಮಾಹಿತಿ, ಪಿರಾಡಿಕಲ್ಸ್ ಮಾಹಿತಿ ಹಾಗೂ ಚೆಕ್ಕುಗಳ ಶಿಷ್ಯವೇತನ ಮಂಜೂರು ಮಾಡಿ ಚೆಕ್ ಅಕೌಂಟ್ಸ್ ಮಾಹಿತಿ ತಯಾರಿಸಿ ಸಲ್ಲಿಸುವುದು.

7) ತಾಲ್ಲೂಕಿನಲ್ಲಿರುವ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗಳಿಗೆ ಹೋಗುವ ಮಕ್ಕಳ ಮಾಹಿತಿಯನ್ನು ಹಾಗೂ ಮೂಲಭೂತ ಮಾಹಿತಿಯನ್ನು ತಯಾರಿಸಿ ಇಡುವುದು.

**ಶಿಕ್ಷಣ:-**

8) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ 1 ರಿಂದ 10ನೇ ತರಗತಿಯ ಮೆಟ್ರಿಕ್ ಪೂರ್ವ ಶಿಷ್ಯವೇತನ ಹಾಗೂ ಮೆಟ್ರಿಕ್ ನಂತರದ ಶಿಷ್ಯವೇತನ ಮಂಜೂರು ಮಾಡುವುದು ಹಾಗೂ ಅದರ ಲೆಕ್ಕಪತ್ರ ಇಡುವುದು ಮತ್ತು ಶಿಷ್ಯವೇತನ ಹಂಚಿಕೆಯಾದ ಪಾವತಿಗಳನ್ನು ಇಡುವುದು.

9) ತಾಲ್ಲೂಕಿನಲ್ಲಿಯ ಎಲ್ಲಾ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಪರಿವೀಕ್ಷಣೆ ಮಾಡುವುದಲ್ಲದೆ, ಅನುದಾನಿತ ಮೆ. ಪೂರ್ವ ಮತ್ತು ಮೆ. ನಂತರದ ವಸತಿ ನಿಲಯಗಳನ್ನು ವೀಕ್ಷಣೆ ಮಾಡುವುದು.

10) ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಣ ವಿತರಣೆ ಮಾಡುವುದು.

11) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಪುಕ್ಕಟೆಯಾಗಿ ಕೊಡುವ ಸಮವಸ್ತ್ರ ಹಾಗೂ ಪಠ್ಯ ಪುಸ್ತಕಗಳನ್ನು ಹಾಗೂ ಇತರೆ ಶೈಕ್ಷಣಿಕ ಸಹಾಯವನ್ನು ಸರಿಯಾಗಿ ವಿತರಣೆ ಮಾಡಿದ್ದಾರೆಯೇ ಹೇಗೆ ಅನ್ನುವುದನ್ನು ಖಚಿತಪಡಿಸಿಕೊಳ್ಳುವುದು.

12) ಪರಿಶಿಷ್ಟ ಜಾತಿಯ ಜನರ ಕಾಲೋನಿಯಲ್ಲಿ ವಯಸ್ಕರ ಶಿಕ್ಷಣ ಯುವಜನ ಇಲಾಖೆ ಹಾಗೂ ಸಹಕಾರ ಇಲಾಖೆಯ ವತಿಯಿಂದ ಸಂಸ್ಥೆಗಳನ್ನು ಸ್ಥಾಪಿಸುವುದರಲ್ಲಿ ಸಹಕಾರ ನೀಡುವುದು.

13) ಶಿಕ್ಷಣ ಸಂಸ್ಥೆಗಳಲ್ಲಿ ಶಿಷ್ಯವೇತನ ಸರಿಯಾಗಿ ವಿತರಣೆ ಮಾಡಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್ ಯೋಜನೆಯಲ್ಲಿ ನೀಡಿದ ಸವಲತ್ತುಗಳನ್ನು ಉಪಯೋಗಿಸಿದ ಬಗ್ಗೆ ತಪಾಸಣೆ ಮಾಡುವುದು.

14) ವಿದ್ಯಾರ್ಥಿನಿಲಯಗಳ ಕಟ್ಟಡ ಕಟ್ಟುವುದು, ಮಿನಿ ಅಂಬೇಡ್ಕರ್ ಭವನ ಕಟ್ಟುವುದು, ಕಲ್ಯಾಣ ಮಂದಿರ ಕಟ್ಟುವುದು ಹಾಗೂ ಶಾಲಾ ಕಟ್ಟಡಗಳನ್ನು ಕಟ್ಟುವುದನ್ನು ಪರಿಶೀಲಿಸುವುದು ಹಾಗೂ ಕಾರ್ಯಗತ ಮಾಡುವುದು.

15) ಟಿ.ಎಸ್.ಪಿ. ಯೋಜನೆ ಹೊರತುಪಡಿಸಿ ಹುಡ್ಕೊ ಎನ್.ಆರ್.ಇ.ಪಿ., ಪಿ.ಎಲ್.ಬಿ.ಆರ್., ಎಲ್.ಸಿ.ಹೆಚ್. ಯೋಜನೆಯಡಿಯಲ್ಲಿ ಯೋಗ್ಯ ಫಲಾನುಭವಿಗಳನ್ನು ಗುರುತಿಸುವುದು ಹಾಗೂ ಆಯ್ಕೆ ಮಾಡಿ ಸಂಬಂಧಿಸಿದ ಇಲಾಖೆಗೆ ಒದಗಿಸುವುದು.

16. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಮೇಲೆ ನಡೆದ ದೌರ್ಜನ್ಯ ಪ್ರಕರಣಕ್ಕೆ ಸಂಬಂಧಿಸಿದಂತೆ ಸಿ.ಆರ್.ಸೆಲ್ಲಿನ ಅಧಿಕಾರಿಗಳೊಂದಿಗೆ ಸಹಕರಿಸುವುದು ಹಾಗೂ ತಾಲ್ಲೂಕು ಮಟ್ಟದ ನಾಗರೀಕ ಹಕ್ಕು ಸಂರಕ್ಷಣಾ ಸಮಿತಿಯ ಕಾರ್ಯಾದಾನಿಯಾಗಿ ಕಾರ್ಯನಿರ್ವಹಿಸುವುದು.

17. ನೈಸರ್ಗಿಕ ಹಾವಳಿ ಮತ್ತು ಬೆಂಕಿ ಅನಾಹುತದಲ್ಲಿ ನೊಂದ ಸಂತ್ರ ಸಂತ್ರಸ್ತರಿಗೆ ಧನ ಸಹಾಯ ಮಾಡುವಲ್ಲಿ ಪ್ರಯತ್ನಿಸುವುದು.

18. ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಸಲುವಾಗಿ ಮನೆ, ಜಾಗೆ, ಸ್ಮಶಾನ ಜಾಗೆ ಈಗಿನ ಕಾಲೋನಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ಪ್ರತ್ಯೇಕ ಕಾಲೋನಿ ನಿರ್ಮಾಣದ ಬಗ್ಗೆ, ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡ ನಿರ್ಮಾಣ ಬಗ್ಗೆ, ಭೂಮಿ ಖರೀದಿ ಬಗ್ಗೆ, ಪ್ರಕರಣಗಳನ್ನು ತಯಾರಿಸುವುದು, ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರಿಗೆ ಮನೆಗಳ ನಿರ್ಮಾಣ ಮಾಡಲು ಮಂಜೂರಾದ ಭೂಮಿಯನ್ನು ಹಾಗೂ ಲೀಜ್ ಮೇಲೆ ಕೊಟ್ಟ ಭೂಮಿಯನ್ನು ವಶಪಡಿಸಿಕೊಳ್ಳುವ

ಕ್ರಮ ಜರುಗಿಸುವುದು, ಸರ್ಕಾರಿ ಗಾಂವಠಾಣ ಜಾಗೆಯನ್ನು ಅಭಿವೃದ್ಧಿ ಪಡಿಸಲು ಮತ್ತು ಮನೆ ಕಟ್ಟಲು ಕಂದಾಯ ಇಲಾಖೆಯಿಂದ ಪಡೆದು ಕೊಳ್ಳುವ ಕ್ರಮ ಜರುಗಿಸುವುದು.

**ಆರ್ಥಿಕಾಭಿವೃದ್ಧಿ**

19) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರ ಒಕ್ಕಲುತನ ಕಾಲೋನಿಗಳನ್ನು ನಿರ್ವಹಿಸುವುದು. ಹಾಗೂ ಜಾಯಿಂಟ್ ಫಾರ್ಮ್ ಕೈಗಾರಿಕೆ, ಕೂಲಿಕಾರ ಸಹಕಾರಿ ಸಂಘಗಳನ್ನು ಅವರ ಅನುಕೂಲಕ್ಕಾಗಿ ಮಾಡುವುದು.

20) ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಸೋಷಿಯಲ್ ಹಾಗೂ ಎಕನಾಮಿಕ್ ಸರ್ವೆ ಮಾಡಿ ಫಲಾನುಭವಿಗಳನ್ನು ವಿಶೇಷ ಘಟಕ ಯೋಜನೆ, ಐ.ಆರ್.ಡಿ.ಪಿ., ಟಿ.ಎಸ್.ಪಿ., ಅಂತ್ಯೋದಯ, ಟ್ರಾಯಿಜಂ, ಯೋಜನೆಗಳ ಸಾಮಾಜಿಕ ಆರ್ಥಿಕ ಸಮೀಕ್ಷೆ ಕೈಗೊಳ್ಳುವುದು.

21) ಭೂ ರಹಿತ ಕಾರ್ಮಿಕರನ್ನು ಗುರುತಿಸುವುದು.

22) ಸ್ಥಳೀಯ ಸಂಸ್ಥೆಗಳು ಕಾಯ್ದಿರಿಸಿದ ಶೇಕಡ 18 ಮತ್ತು 20ರ ಹಣದಲ್ಲಿ ಯೋಜನೆಗಳನ್ನು ಕಾರ್ಯಗತ ಮಾಡುವುದು.

23) ಅಂತರ್ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯ ಧನ ಮಂಜೂರು ಕುರಿತು ಪ್ರಕರಣ ತಯಾರಿಸುವುದು.

24) ಪರಿಶಿಷ್ಟ ಜಾತಿಯ ಜನರ ವಾಸದ ಮನೆಗಳಿಗೆ ಹಾಗೂ ಕಾಲೋನಿಗಳಿಗೆ ವಿದ್ಯುತ್ ಪೂರೈಕೆ ಕುರಿತು ಹಾಗೂ ಕುಡಿಯುವ ನೀರಿನ ಪೂರೈಕೆ ಕುರಿತು ಸಮೀಕ್ಷೆ ಮಾಡುವುದು.

25) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಯಾರು ವೃದ್ಧಾಪ್ಯವೇತನ, ವಿಧವಾ ವೇತನ ಹೆರಿಗೆ ಭತ್ಯೆ, ಅಂಗವಿಕಲರ ಭತ್ಯೆ ಮತ್ತು ಕ್ರಾನಿಕ್ ರೋಗದಿಂದ ಬಳಲುವವರೋ ಅಂತಹ ಫಲಾನುಭವಿಗಳನ್ನು ಗುರುತಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ಭೇಟಿಯಾಗಿ ಮಂಜೂರಿಸುವುದು.

26) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ತಮ್ಮ ಭೂಮಿಗಳನ್ನು ಮರಳಿ ಪಡೆಯುವಲ್ಲಿ ಸಹಾಯ ಮಾಡುವುದು ಹಾಗೂ ಭೂಮಿ ಮಂಜೂರಿಯಲ್ಲಿಯೂ ಸಹಾಯ ಮಾಡುವುದು.

**ಇತರೆ**

27) ಸರ್ಕಾರಿ ಇಲಾಖೆ ಅರೆ ಸರ್ಕಾರಿ ಇಲಾಖೆ, ಸ್ಥಳೀಯ ಸಂಸ್ಥೆ ಮತ್ತು ಔದ್ಯೋಗಿಕಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಾವಳಿ ಪ್ರಕಾರ ನೇಮಕಾತಿ ಮಾಡಿದ ಬಗ್ಗೆ ಪರಿಶೀಲನೆ ಮಾಡಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ಸಲ್ಲಿಸುವುದು.

28) ಇತರೆ ಇಲಾಖೆಯಿಂದ ಜಾತಿ ಪರಿಶೀಲನೆಗೆ ಬಂದ ಜಾತಿ ಪ್ರಮಾಣ ಪತ್ರಗಳ ಸಿಂಧುತ್ವವನ್ನು ಪರಿಶೀಲನೆ ಮಾಡುವುದು.

29) ಸರ್ಕಾರಿ ಸಂಘಗಳಲ್ಲಿ, ಯೂತ್ ಕ್ಲಬ್‌ಗಳಲ್ಲಿ, ಮಹಿಳಾ ಮಂಡಳಿಗಳಲ್ಲಿ, ಸ್ಥಳೀಯ ಅಭಿವೃದ್ಧಿಯ ಬ್ಯಾಂಕ್‌ಗಳಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಜನರು ಸದಸ್ಯತ್ವ ಹೊಂದಲು ಪ್ರೋತ್ಸಾಹಿಸುವುದು.

30) ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್ : ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಅಧಿಕಾರಿಗಳು ಹಾಗೂ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ರವರು ವಹಿಸುವ ಯಾವುದೇ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು.

**3) ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:-**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾಯ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯನಿರ್ವಹಿಸುವುದು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂಥಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ, ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:-**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗಾಗಿ ಇತ್ಯರ್ಥಪಡಿಸುವುದು.

2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಲೆ ರುಜು ತಪಾಸಣೆ ಕಾರ್ಯ

4) ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.

5) ಸರ್ಕಾರವು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿಗತಿಯಲ್ಲಿ ಪಾಲಿಸುವುದು.

6) ಸಾರ್ವಜನಿಕ ಕುಂದು ಕೊರತೆಗಳ ನಿರ್ವಹಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:-**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.

2) ಸಾರ್ವಜನಿಕ ಕುಂದು ಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಘ.ಯೋ.)ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್‌ರವನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿಯೂ, ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂಥ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಪಿ.ಆರ್. 799 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಕೂಡ್ಲಿಗಿ, ಬಳ್ಳಾರಿ ಜಿಲ್ಲೆ.

## ಲೋಕೋಪಯೋಗಿ ಇಲಾಖೆ

## ಅಧಿಸೂಚನೆ ಸಂಖ್ಯೆ: ಲೋಇ05 ಸೇಸಕಿ 2004, ಬೆಂಗಳೂರು, ದಿನಾಂಕ: 14ನೇ ಮೇ 2004

ಅಧಿಸೂಚನೆ ಸಂಖ್ಯೆ:ಲೋಇ 108 ಎಸ್‌ಪಿಎನ್ 02 ದಿನಾಂಕ:11-4-02ರಲ್ಲಿ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪಿನನ್ವಯ ದಿನಾಂಕ:1-3-02 ರಲ್ಲಿದ್ದಂತೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದೆ. ಅದರಲ್ಲಿ ಶ್ರೀ ಜಿ.ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿದ) ಇವರಿಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಜೇಷ್ಠತಾ ಕ್ರಮ ಸಂಖ್ಯೆ:2222 (ಕಿರಿಯ ಇಂಜಿನಿಯರ್ ವೃಂದದಲ್ಲಿ 6159)ರಲ್ಲಿ ಪ್ರತಿಬಿಂಬಿತವಾಗಿದೆ. ನಂತರ, ಶ್ರೀ ಜಿ.ಡಿ.ಮಂಕಾಳೆ ಇವರು ಮತ್ತು ದಿನಾಂಕ:11-4-02ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಕೆ. ಬಸವರಾಜ್ ಕ್ರಮ ಸಂಖ್ಯೆ:1786 (ಕಿರಿಯ ಇಂಜಿನಿಯರ್ 6160) ನಿಗದಿಗೊಂಡು ಅರ್ಹತಾ ದಿ:15-9-95 ಎಂದು ನಿಗದಿಪಡಿಸಿರುವುದರಿಂದ ತಮಗೆ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-2) ಹುದ್ದೆಗೆ ಬಡ್ತಿ ನೀಡುವ ಸಂದರ್ಭದಲ್ಲಿ ಅನ್ಯಾಯವಾಗಲಿದೆಯೆಂದು, ತಮ್ಮ ಜೇಷ್ಠತೆಯ ಸ್ಥಾನವನ್ನು ತಮಗಿಂತಲೂ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಬಸವರಾಜ್ ಇವರ ಜೇಷ್ಠತೆಯ ಮೇಲೆ ನಿಗದಿಪಡಿಸುವಂತೆ ಕೋರಿರುತ್ತಾರೆ. ದಿನಾಂಕ:11-4-02ರಂದು ಪ್ರಕಟಿಸಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಬಸವರಾಜ್ ಇವರ ಜೇಷ್ಠತಾ ಕ್ರಮ ಸಂಖ್ಯೆ:1786 (ಕಿರಿಯ ಇಂಜಿನಿಯರ್ 6160)ನ್ನು ಆಧಾರವಾಗಿಟ್ಟು ಶ್ರೀ ಜಿ.ಡಿ. ಮಂಕಾಳೆ, ಇವರ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದಲ್ಲಿ ಪುನರ್‌ನಿಗದಿಪಡಿಸುವ ಸರ್ಕಾರದ ಕ್ರಮದ ಬಗ್ಗೆ ಯಾವುದೇ ಅಹವಾಲು:ಆಕ್ಷೇಪಣೆಗಳು ಇದ್ದಲ್ಲಿ ಅವುಗಳನ್ನು ಸಮರ್ಥಿಸುವಂತಹ ಸೂಕ್ತ ದಾಖಲೆ ಸಮೇತ ಸರ್ಕಾರಕ್ಕೆ 15 ದಿವಸದೊಳಗಾಗಿ ಸಲ್ಲಿಸುವಂತೆ ಸಮ ಸಂಖ್ಯೆ ದಿನಾಂಕ:20-3-04ರ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಈ ಬಗ್ಗೆ ಯಾವುದೇ ಆಕ್ಷೇಪಣೆ:ಅಹವಾಲುಗಳು ಸ್ವೀಕೃತವಾಗಿಲ್ಲದೇ ಇರುವುದರಿಂದ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾದ ದಿನಾಂಕ:11-4-02ರ ಅಧಿಸೂಚನೆ ಸಂಖ್ಯೆ:ಲೋಇ 108 ಎಸ್‌ಪಿಎನ್ 02 ದಿನಾಂಕ:11-4-02ರಲ್ಲಿ ಶ್ರೀ ಜಿ.ಡಿ. ಮಂಕಾಳೆ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಅವರ ಜೇಷ್ಠತೆಯನ್ನು ಈ ಕೆಳಕಂಡಂತೆ ಸೂಕ್ತ ಸ್ಥಾನದಲ್ಲಿ ಪುನರ್ ನಿಗದಿಗೊಳಿಸಲಾಗಿದೆ.

| ಕ್ರ. ಸಂ. | ಕಿರಿಯ ಇಂಜಿನಿಯರ್ ಹುದ್ದೆಯ ಜೇಷ್ಠತಾ ಕ್ರ. ಸಂ. | ಇಂಜಿನಿಯರ್ ಹೆಸರು | ಪ.ಜಾತಿ/ಪ.ಪಂ. | ಜನ್ಮ ದಿನಾಂಕ | ವಾಸ್ತವವಾಗಿ ಕಿರಿಯ ಇಂಜಿನಿಯರ್ (ವಿದ) ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1785-ಎ | 6159 | ಜಿ.ಡಿ. ಮಂಕಾಳೆ | ಪ.ಜಾ. | 10.3.1964 | 23.6.99 | 15.9.95 | |

ಈ ತಾತ್ಕಾಲಿಕ ಜೇಷ್ಠತಾ ನಿಗದಿಯು ದಿ:11-4-02ರ ಅಧಿಸೂಚನೆ ಸಂಖ್ಯೆ: ಲೋಇ 108 ಸೇಸಕಿ 02 ರಲ್ಲಿ ವಿಧಿಸಲಾಗಿರುವ ಷರತ್ತುಗಳಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 857 ಎಂ. ವೆಂಕಟರಸಪ್ಪ

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ)

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ

## ಸಂಖ್ಯೆ:ಡಬ್ಲ್ಯೂಸಿಎ:ಸಿಆರ್:8:ಎಫ್‌ಸಿ:2004, ದಿನಾಂಕ: 27ನೇ ಮೇ 2004

ಅರ್ಜಿದಾರರು

1. ಶ್ರೀ ಎಸ್. ಶಂಗೋದನ್ S/o ಶಂಗೋದ ಗೌಡರ್
2. ನೆಲಮ್ಮ W/o ಶಂಗೋದನ್
3. ಎಸ್. ಸರಸು D/o ಶಂಗೋದನ್

ವಾಸ: ಕುರುವ ಪಟ್ಟಿ P.O. ಚಿತ್ತೂರು, ಇಡುಪಾಡಿ, ಸೇಲಂ ಜಿಲ್ಲೆ, ತಮಿಳುನಾಡು.

ವಿರುದ್ಧ

ಪ್ರತಿವಾದಿಗಳು

1. ಎಸ್. ರಮೇಶ್ ಬಿನ್ ಶಂಗೋದನ್ ನಂ. 2353, 2ನೇ ಕ್ರಾಸ್, ಆರ್.ಪಿ.ಸಿ.ಲೇಔಟ್, ವಿಜಯನಗರ, ಬೆಂಗಳೂರು.
2. ದಿ ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., 1ನೇ ಮಹಡಿ, ಸಲೇಭವಾನಿ, ಮೈನ್ ರೋಡ್, ಶಂಕಗಿರಿ.

## ಪ್ರಕಟಣೆ

ಅರ್ಜಿದಾರರಾದ ಶ್ರೀ ಎಸ್. ಶಂಗೋದನ್ ಇವರು ತಮ್ಮ ಮಗನಾದ ಶ್ರೀ ಎಸ್. ವೆಂಕಟೇಶನ್ ಇವರು ಪ್ರತಿವಾದಿಗಳಾದ ಶ್ರೀ ಎಸ್. ರಮೇಶ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ 6-4-2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ

ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

ಎಸ್.ಸಿ. ರಾಮಚಂದ್ರ

ಪಿ.ಆರ್. 801

ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-18**

**ದಾವಾ ಅರ್ಜಿ ಸಂಖ್ಯೆ.ಜೆಆರ್‌ಬಿ:ಡಿಸ್:4500:2003-04, ದಿನಾಂಕ: 24ನೇ ಮೇ 2004**

| **ವಾದಿ** | **ಪ್ರತಿವಾದಿಗಳು** |
|---|---|
| ವ್ಯವಸ್ಥಾಪಕ ನಿರ್ದೇಶಕರು, | ಪ್ರಧಾನ ವ್ಯವಸ್ಥಾಪಕರು, |
| ಚಿತ್ರದುರ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ಚಿತ್ರದುರ್ಗ | ಚಳ್ಳಕೆರೆ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ನಿಯಮಿತ, ಚಳ್ಳಕೆರೆ. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಚರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.1,34,79,241-00 ಗಳನ್ನು ದಿನಾಂಕ:1-10-2003 ರಿಂದ ಶೇಕಡಾ 17 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ಸಂಖ್ಯೆ.ಜೆಆರ್‌ಬಿ:ಡಿಸ್:4500:2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ. ವಾದಿಯ ಈ ದಾವಾ ಅರ್ಜಿಯನ್ನು ಇತ್ಯರ್ಥಕ್ಕಾಗಿ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ ಇವರಿಗೆ ವಹಿಸಲಾಗಿದೆ.

2. ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಯ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್:ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್: ಡಿಕ್ರಿಯನ್ವಯ ಪ್ರತಿವಾದಿಯಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಯಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದೂ ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ವಾದಿಯು ಕಲಂ 103 ರಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಯು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ:ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21-11-2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.1,34,79,241-00 ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ಜಮಾ ಮಾಡಿ ದಿನಾಂಕ:18-6-2004 ರ ಒಳಗಾಗಿ ಅಧಿಕೃತ ಚಲನ್ / ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಪ್ರತಿವಾದಿಯ ಹೆಸರಿನಲ್ಲಿ ಚಳ್ಳಕೆರೆ ಟೌನ್‌ನಲ್ಲಿರುವ ಕೆ.ಟಿ.ನಂ./ಎ.ನಂ./234/222/210/1332/ಎ 55 ಅಡಿ x 20 ಅಡಿ ಅಳತೆಯ ನಿವೇಶನ ಮತ್ತು ಸದರಿ ನಿವೇಶನದಲ್ಲಿ ಕಟ್ಟಲಾಗಿರುವ ಎರಡು ಅಂತಸ್ತಿನ ಕಟ್ಟಡ, ವ್ಯಾಪಾರ ಮಳಿಗೆ, ಇತ್ಯಾದಿ ಸೇರಿದಂತೆ, ಚಕ್ಕುಬಂದಿ:

ಪೂರ್ವಕ್ಕೆ : ಬೆಂಗಳೂರು ಬಳ್ಳಾರಿ ರಸ್ತೆ

ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ ರಸ್ತೆ

ಉತ್ತರಕ್ಕೆ : ಕನ್ಸರ್‌ವೆನ್ಸಿ ರಸ್ತೆ

ದಕ್ಷಿಣಕ್ಕೆ : ವೀರಶೈವ ಹಾಸ್ಟೆಲ್‌ಗೆ ಸೇರಿದ ಖಾಲಿ ನಿವೇಶನ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 24-5-2004 ರಂದು ನೀಡಿರುತ್ತೇನೆ.

ಬಸವೇಗೌಡ

ಪಿ.ಆರ್. 802 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಕಾಂಟೆಸ್ಸಾ ಕ್ಲಾಸಿಕ್ ಕಾರ್ ನೊಂದಣಿ ಸಂಖ್ಯೆ: ಎಂಹೆಚ್-01-A-476ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ:285: ಸಿಬ್ಬಂದಿ:ಸಬೈ: ಶ್ರೀಗಂಧದ ತುಂಡುಗಳು/1998-99 ದಿನಾಂಕ: 31.01.1999.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ:17.04.1999ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 01.07.1999 ರಲ್ಲಿ ಪ್ರಕಟವಾಗಿರುತ್ತದೆ. ಹಾಗೂ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ: 02.05.1999 ರಲ್ಲಿ ಪ್ರಕಟವಾಗಿದೆ.

**ಪ್ರಕರಣದ ಹಿನ್ನೆಲೆ:**

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ಉಪ ವಿಭಾಗ, ಶಿವಮೊಗ್ಗ ಮತ್ತು ಸೆಕ್ರೆಬೈಲು ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ದಿನಾಂಕ:31.01.1999 ರಂದು ಹಣಗೆರೆಮ್ಮ ದೇವಸ್ಥಾನದ ಹತ್ತಿರ ಕಾಂಟೆಸ್ಸಾ ಕ್ಲಾಸಿಕ್ ಕಾರ್ ನೊಂದಣಿ ಸಂಖ್ಯೆ ಎಂಹೆಚ್-01-A-476 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 216 ಸಂಖ್ಯೆಯ ತುಂಡುಗಳಿರುವ 418.00 ಕೆ.ಜಿ. ತೂಕವಿರುವ ಶ್ರೀಗಂಧವನ್ನು ವಾಹನ ಸಮೇತ ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಶ್ರೀಗಂಧದ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ ಸಂಯುಕ್ತ ಕರ್ನಾಟಕದಲ್ಲಿ ದಿನಾಂಕ: 02.05.1999 ರಂದು ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 01.07.1999 ರಲ್ಲಿ ಪ್ರಕಟಿಸಲಾಗಿರುತ್ತದೆ.

ಮೇಲ್ಕಂಡ ವಾಹನದ ನೊಂದಣಿ ಸಂಖ್ಯೆ ದೃಢೀಕರಣ ಮತ್ತು ಮಾಲೀಕತ್ವದ ಬಗ್ಗೆ ಸಾರ್ವಜನಿಕರ ಗಮನಕ್ಕೆ ತರಲು, ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ: 02.05.1999 ರಂದು ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 01.07.1999 ರಂದು ಪ್ರಕಟಣೆಯನ್ನು ಹೊರಡಿಸಲಾಗಿದೆ. ಅಲ್ಲದೇ ವಾಹನದ ನೊಂದಾಯಿತ ಮಾಲೀಕರ ವಿಳಾಸಕ್ಕಾಗಿ ಟ್ರಾನ್ಸ್‌ಪೋರ್ಟ್ ಕಮಿಷನರ್, ಮುಂಬೈ (ಸೆಂಟ್ರಲ್) ಇವರಿಗೆ ಸಹ ಪತ್ರ ಬರೆದು, ಸದರಿ ವಾಹನ ಯಾವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ವ್ಯಾಪ್ತಿಗೆ ಬರುತ್ತದೆ ಎಂದು ಮೂರು ಬಾರಿ ಕೋರಿದ್ದಾಗ್ಯೂ ಕೂಡ, ಅವರಿಂದ ಉತ್ತರ ಲಭ್ಯವಾಗಿರುವುದಿಲ್ಲ.

ಈ ಮೊಕದ್ದಮೆಗೆ ಸಂಬಂಧಪಟ್ಟಂತೆ, ಸಾಕಷ್ಟು ಕಾಲಾವಕಾಶ ಕೊಟ್ಟರೂ, ವಾಹನದ ವಾರಸುದಾರರು, ಸದರಿ ವಾಹನದ ಬಗ್ಗೆ ತಮ್ಮ ಮಾಲಿಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೂ ಕೋರದೇ ಇರುವುದರಿಂದ ಈ ವಾಹನವನ್ನು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಿದ್ದುದು ಸ್ಪಷ್ಟವಾಗಿರುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂ.ಎ3(ಬಿ1):ಅಮೊ:ಶ್ರೀಗಂಧ:ಕಾಂಟೆಸ್ಸಾ ಕ್ಲಾಸಿಕ್:ಸಿಆರ್-19/1998-99, ದಿನಾಂಕ: 17ನೇ ಮೇ 2004**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಿಳಿ ಬಣ್ಣದ ಕಾಂಟೆಸ್ಸಾ ಕ್ಲಾಸಿಕ್ ಕಾರ್ ನೊಂದಣಿ ಸಂಖ್ಯೆ: ಎಂಹೆಚ್-01-A-476 (ಇಂಜಿನ್ ನಂಬರ್ 3EC-003747, ಛಾಸಿಸ್ ನಂಬರ್ C-609233) ಮತ್ತು 216 ಸಂಖ್ಯೆಯ ಶ್ರೀಗಂಧದ ತುಂಡುಗಳು 418.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧ ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 17.05.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 803 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಮಾನ್ಯ 5ನೇ ಎಸಿಎಂಎಂ ನ್ಯಾಯಾಲಯದಲ್ಲಿ, ಬೆಂಗಳೂರುನಗರ**

**ವಿಷಯ:** ಬಸವೇಶ್ವರನಗರ ಪೊಲೀಸ್ ಠಾಣೆಯಲ್ಲಿ ಕೆಲವು ಸೀಮಿಸ್ ನಂ. ಮತ್ತು ಮೊಕದ್ದಮೆಗಳಲ್ಲಿ ವಾರಸುದಾರರು ಇಲ್ಲದೇ ವಶಪಡಿಸಿರುವ ವಾಹನಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ನಿವೇದನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ಮಾನ್ಯ ನ್ಯಾಯಾಲಯದಲ್ಲಿ ಕೋರುವುದೇನೆಂದರೆ ಬಸವೇಶ್ವರನಗರ ಪೊಲೀಸ್ ಠಾಣೆಯಲ್ಲಿ ಕೆಲವು ಸೀಮಿಸ್ ನಂ. ಮತ್ತು ಮೊಕದ್ದಮೆಗಳಲ್ಲಿ ವಾರಸುದಾರರು ಇಲ್ಲದೇ ವಶಪಡಿಸಿರುವ ವಾಹನಗಳ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಬೆಂಗಳೂರುನಗರದ ಎಲ್ಲಾ ಪೊಲೀಸ್ ಠಾಣೆಗಳಿಗೆ ಸುತ್ತೋಲೆಗಳನ್ನು ಹೊರಡಿಸಿದ್ದು, ವಾರಸುದಾರರು ಪತ್ತೆಯಾಗಿರುವುದಿಲ್ಲ. ಸದರಿ ವಾಹನಗಳನ್ನು ವಿಲೇವಾರಿ ಮಾಡುವ ಸಲುವಾಗಿ ಈ ಪ್ರಕಟಣೆಯನ್ನು ಪ್ರಕಟಿಸಲಾಗಿದೆ.

| ಕ್ರ. ಸಂ. | ಮೊ.ಸಂ. | ಮಾಲುಪಟ್ಟಿ ಸಂಖ್ಯೆ | ಮಾಲಿನ ವಿವರ |
|---|---|---|---|
| 1. | ಸೀಮಿಸ್ 831/03 | 132/03 | ಒಂದು ನಂಬರ್ ಇಲ್ಲದ ಬಿಳಿ ಬಣ್ಣದ ಮಾರುತಿ ವ್ಯಾನ್, ಇಂಜಿನ್ ನಂ.ಎಫ್8ಬಿ-ಐಎನ್-1287944, ಚಾಸೀಸ್ ನಂ.ಎಸ್‌ಟಿ-91-ಐಎನ್-146697 |
| 2. | ಸೀಮಿಸ್ ನಂ.123/04 | 33/04 | ಒಂದು ನೀಲಿ ಬಣ್ಣದ ಹಳೆಯ ಪ್ರಿಯಾ ಸ್ಕೂಟರ್ ನಂ.ಎಂ.ಇ.ಆರ್-7986, ಇಂಜಿನ್ ನಂ.03-7902- ಎಂಓ-29322 |
| 3. | ಸೀಮಿಸ್ ನಂ.123/04 | 33/04 | ಹಸಿರು ಬಣ್ಣದ ಹಳೆಯ ಒಂದು ವೆಸ್ಪಾ ಸ್ಕೂಟರ್-150 ನಂ.ಎಂ.ಇ.ಆರ್-797, ಇಂಜಿನ್ ನಂ.ವಿ-46212-ಎಂ-143131 |
| 4. | ಮೊ.ಸಂ.459/97 ಕಲಂ 379 ಐಪಿಸಿ. | 187/98 | ಒಂದು ಬಿಳಿಯ ಬಣ್ಣದ ಹಳೆಯ ವೆಸ್ಪಾ ಸ್ಕೂಟರ್ ನಂ. ಇಂಜಿನ್ ನಂ. ಚಾಸಿಸ್ ನಂ ಇರುವುದಿಲ್ಲ. |
| 5. | ಮೊ.ಸಂ.45/2000 ಕಲಂ 379 ಐಪಿಸಿ. | 30/2000 | ಒಂದು ಆರ್.ಎಕ್ಸ್-100 ಯಮಹಾ ಮೋಟಾರ್ ಸೈಕಲ್ ನಂ.ಸಿ.ಕೆ.ಡಿ-6893, ಇಂಜಿನ್ ನಂ ಮತ್ತು ಚಾಸಿಸ್ ನಂ. ಐ.ಎಲ್.ಐ02-9283. |
| 6. | ಸೀಮಿಸ್ ನಂ.102/2001 | 13/2001 | ಕೈನೆಟಿಕ್ ಹೊಂಡ, ಕಪ್ಪು ಬಣ್ಣ, ನಂ.ಕೆ.ಎ.05-ಯು-976, ಇಂಜಿನ್ ನಂ.697426, ಚಾಸಿಸ್ ನಂ. ಇರುವುದಿಲ್ಲ. |
| 7. | ಸೀಮಿಸ್ ನಂ.395/03 | 60/2003 | ಹಿರೋಹೊಂಡಾ ಮೋಟಾರ್ ಸೈಕಲ್, ನಂ.ಕೆ.ಎ.02-ಎಸ್- 8693, ಇಂಜಿನ್ ನಂ. 96 ಎಲ್ಐಓಇ 04707 |
| 8. | ಮೊ.ಸಂ.129/99 ಕಲಂ 397 ರೆ/ವಿ. 3, 25, 27 ಇಂಡಿಯನ್ ಆರ್ಮ್ಸ್ ಆಕ್ಟ್ | 82/99 | ಒಂದು ಬಿಳಿ ಬಣ್ಣದ ಮಾರುತಿ ವ್ಯಾನ್ ನಂಬರ್ ಇರುವುದಿಲ್ಲ. ಇಂಜಿನ್ ನಂ.1214539, ಚಾಸಿಸ್ ನಂ.911 ಎನ್.126759 |

ಪಿ.ಆರ್. 806 ಪೊಲೀಸ್ ಇನ್ಸ್‌ಪೆಕ್ಟರ್, ಬಸವೇಶ್ವರನಗರ ಪೊಲೀಸ್ ಠಾಣೆ, ಬೆಂಗಳೂರು-560 079

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಫಿಯಟ್ ಕಾರ್ ನೊಂದಣಿ ಸಂಖ್ಯೆ: ಎಂಇಟಿ-8925 ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ:199/2000-01/ ವಅಅ/ಸಬೈ/ಶ್ರೀಗಂಧ/ಫಿಯಟ್ ಕಾರು ದಿನಾಂಕ: 11.09.2000.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ:11.09.2000ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 26.10.2000 ರಲ್ಲಿ ಪ್ರಕಟವಾಗಿರುತ್ತದೆ. ಹಾಗೂ ಕನ್ನಡ ಪ್ರಭ ದಿನಪತ್ರಿಕೆಯಲ್ಲಿ ದಿನಾಂಕ: 28.09.2000 ರಲ್ಲಿ ಪ್ರಕಟವಾಗಿದೆ.

**ಪ್ರಕರಣದ ಹಿನ್ನೆಲೆ:**

ಸಕ್ರೆಬೈಲು ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು ಖಚಿತ ವರ್ತಮಾನದ ಮೇರೆಗೆ ದಿನಾಂಕ:10.09.2000 ರಂದು ಗಾಜನೂರು ಅರಣ್ಯ ತನಿಖಾ ಠಾಣೆಯ ಬಳಿ ಫಿಯಟ್ ಕಾರ್ ನೊಂದಣಿ ಸಂಖ್ಯೆ ಎಂಇಟಿ-7925 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 62 ಸಂಖ್ಯೆಯ ತುಂಡುಗಳಿರುವ 42.00 ಕೆ.ಜಿ. ತೂಕವಿರುವ ಶ್ರೀಗಂಧವನ್ನು ವಾಹನ ಸಮೇತ ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಶ್ರೀಗಂಧ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ಕನ್ನಡ ದಿನಪತ್ರಿಕೆಯಾದ ಕನ್ನಡ ಪ್ರಭದಲ್ಲಿ ದಿನಾಂಕ: 28.09.2000 ರಂದು ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 26.10.2000 ರಲ್ಲಿ ಪ್ರಕಟಿಸಲಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು-34 (ಕೇಂದ್ರ) ಇವರನ್ನು ವಾಹನದ ನೊಂದಾಯಿತ ಮಾಲಿಕರ ವಿಳಾಸ ಕೋರಲಾಗಿ, ಸದರಿ ವಾಹನವು ಶ್ರೀ ಕೆ. ಚತುರ್ವೇದಿ ಬಿನ್ ಹೆಚ್.ಎಲ್. ಚತುರ್ವೇದಿ, ಹೊಎಫ್‌ಡಿವೈ, ಫೈಬರ್ಸ್ ಇಂಡಸ್ಟ್ರೀಸ್, ಹೌಸ್ ನಂಬರ್ 45, ಫೇಯರ್ ಫೀಲ್ಡ್ ರೋಡ್, ಬೆಂಗಳೂರು ಇವರದ್ದಾಗಿ ತಿಳಿಸಿದ್ದರಿಂದ ಸದರಿಯವರಿಗೆ ದಿನಾಂಕ: 10.10.2002 ಮತ್ತು 08.12.2003 ರಂದು ನೊಂದಾಯಿತ ಅಂಚೆ ಮೂಲಕ ಅರಣ್ಯ ಮೊಕದ್ದಮೆಯಲ್ಲಿ ಸಿಲುಕಿದ ಮೇಲ್ಕಂಡ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬುದಕ್ಕೆ ಕಾರಣ ಕೇಳಿ ತಿಳುವಳಿಕೆ ಪತ್ರ ಬರೆಯಲಾಗಿ ವಾಹನ ಮಾಲೀಕತ್ವದ ಬಗ್ಗೆ ಯಾವುದೇ ಅಹವಾಲನ್ನು ಸಲ್ಲಿಸಿರುವುದಿಲ್ಲ.

ಈ ಮೊಕದ್ದಮೆಗೆ ಸಂಬಂಧಪಟ್ಟಂತೆ, ಸಾಕಷ್ಟು ಕಾಲಾವಕಾಶ ಕೊಟ್ಟರೂ, ವಾಹನದ ವಾರಸುದಾರರು, ಸದರಿ ವಾಹನದ ಬಗ್ಗೆ ತಮ್ಮ ಮಾಲಿಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೂ ಕೋರದೇ ಇರುವುದರಿಂದ ಈ ವಾಹನವನ್ನು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಿದ್ದುದು ಸ್ಪಷ್ಟವಾಗಿರುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂ.ಎ3(ಬಿ1):ಅಮೊ:ಶ್ರೀಗಂಧ:ಫಿಯಟ್:ಸಿಆರ್-19/1998-99, ದಿನಾಂಕ: 17ನೇ ಮೇ 2004**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಿಳಿ ಬಣ್ಣದ ಫಿಯಟ್ ಕಾರ್ ನೊಂದಣಿ ಸಂಖ್ಯೆ: ಎಂಇಟಿ-8925 (ಇಂಜಿನ್ ನಂಬರ್ 168953, ಛಾಸಿಸ್ ನಂಬರ್ 251505) ಮತ್ತು 62 ಸಂಖ್ಯೆಯ ಶ್ರೀಗಂಧದ ತುಂಡುಗಳು 42.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧ ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 17.05.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 804 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಹೆಚ್-9181ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ವಲಯ ಅರಣ್ಯಾಧಿಕಾರಿ, ಸಕ್ರೆಬೈಲು ವನ್ಯಜೀವಿ ವಲಯ, ಗಾಜನೂರು ಇವರ ಪತ್ರದ ಸಂಖ್ಯೆ:ವಅಅ/ಸಬೈ/ಅಮೊ-158/2000-01 ದಿನಾಂಕ: 10.08.2000.
2. ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ:16.08.2000ರ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 5.10.2000 ರಲ್ಲಿ ಪ್ರಕಟವಾಗಿರುತ್ತದೆ. ಹಾಗೂ ಸ್ಥಳೀಯ ಎಚ್ಚರಿಕೆ ದಿನಪತ್ರಿಕೆಯಲ್ಲಿ ದಿನಾಂಕ: 02.09.2000 ರಲ್ಲಿ ಪ್ರಕಟವಾಗಿದೆ.

**ಪ್ರಕರಣದ ಹಿನ್ನೆಲೆ:**

ಸಕ್ರೆಬೈಲು ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಗಳು, ಖಚಿತ ವರ್ತಮಾನದ ಮೇರೆಗೆ ದಿನಾಂಕ:06.08.2000 ರಂದು ಗಾಜನೂರು ಅರಣ್ಯ ತನಿಖಾ ಠಾಣೆಯ ಬಳಿ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ ಕೆಎ-14-ಹೆಚ್-9181 ರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ 44 ಸಂಖ್ಯೆಯ ತುಂಡುಗಳು ಮತ್ತು ಚಕ್ಕೆ ಇರುವ 21.00 ಕೆ.ಜಿ. ತೂಕದ ಶ್ರೀಗಂಧವನ್ನು ವಾಹನ ಸಮೇತ ಸರ್ಕಾರಿ ಪರ ಅಮಾನತ್ತುಪಡಿಸಿ, ಅರಣ್ಯ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ ಮತ್ತು ಶ್ರೀಗಂಧ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ ತಿಳುವಳಿಕೆ ಪತ್ರವನ್ನು ಎಚ್ಚರಿಕೆ ಸ್ಥಳೀಯ ದಿನಪತ್ರಿಕೆಯಲ್ಲಿ ದಿನಾಂಕ: 02.09.2000 ರಂದು ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ: 05.10.2000 ರಲ್ಲಿ ಪ್ರಕಟಿಸಲಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರನ್ನು ವಾಹನದ ನೊಂದಾಯಿತ ಮಾಲಿಕರ ವಿಳಾಸ ಕೋರಲಾಗಿ, ಸದರಿ ವಾಹನವು ಶ್ರೀ ಪಿ. ದಿವಾಕರ ಬಿನ್ ಬಿ. ಪ್ರಕಾಶ್, ಶಾಂತಿ ನಿಲಯ, ಹೆಚ್. ಸಿದ್ದಯ್ಯ ರಸ್ತೆ, ಶಿವಮೊಗ್ಗ ಇವರದ್ದಾಗಿ ತಿಳಿಸಿದ್ದರಿಂದ ಸದರಿಯವರಿಗೆ ದಿನಾಂಕ: 14.12.2001 ಮತ್ತು 09.04.2002 ರಂದು ನೊಂದಾಯಿತ ಅಂಚೆ ಮೂಲಕ ಅರಣ್ಯ ಮೊಕದ್ದಮೆಯಲ್ಲಿ ಸಿಲುಕಿದ ಮೇಲ್ಕಂಡ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ಕಾರಣ ಕೇಳಿ ತಿಳುವಳಿಕೆ ಪತ್ರ ಬರೆಯಲಾಗಿತ್ತು. ಸದರಿಯವರು ಶಿವಮೊಗ್ಗ ನಗರದ ಅರುಣ್ ಮೋಟಾರ್ಸ್‌ನವರು ನಡೆಸಿದ ವಾಹನ ಬದಲಾವಣೆ ಸಂದರ್ಭದಲ್ಲಿ, ಶ್ರೀ ಮುಷೀರ್ ಆಟೋ ಕನ್ಸಲ್‌ಟೆಂಟ್, ಕೆ.ಆರ್. ಪುರಂ, ಮೊದಲನೇ ತಿರುವು, ಆಲಿಕ್ ಪ್ರಿಂಟಿಂಗ್ ಪ್ರೆಸ್ ಹತ್ತಿರ, ಶಿವಮೊಗ್ಗ ಇವರಿಗೆ ಮಾರಾಟ ಮಾಡಲಾಗಿದೆ ಎಂದು ತಿಳಿಸಿರುವ ಮೇರೆಗೆ ಎರಡನೇ ಖರೀದಿದಾರರಿಗೆ ಈ ನ್ಯಾಯಾಲಯದ ದಿನಾಂಕ: 26.10.2002, 08.10.2003 ಮತ್ತು 20.02.2004 ರಂದು ತಿಳುವಳಿಕೆ ಪತ್ರ ನೀಡಲಾಗಿದ್ದು, ಸದರಿ ತಿಳುವಳಿಕೆ ಪತ್ರಗಳು ವಾಪಸ್ ಬಂದಿರುತ್ತವೆ. ವಾಹನ ಮಾಲಿಕತ್ವದ ಬಗ್ಗೆ ಯಾವುದೇ ಅಹವಾಲನ್ನು ಸಲ್ಲಿಸಿರುವುದಿಲ್ಲ.

ಈ ಮೊಕದ್ದಮೆಗೆ ಸಂಬಂಧಪಟ್ಟಂತೆ, ಸಾಕಷ್ಟು ಕಾಲಾವಕಾಶ ಕೊಟ್ಟರೂ, ವಾಹನದ ವಾರಸುದಾರರು, ಸದರಿ ವಾಹನದ ಬಗ್ಗೆ ತಮ್ಮ ಮಾಲಿಕತ್ವವನ್ನು ದೃಢೀಕರಿಸಿ, ವಾಹನವನ್ನು ವಶಕ್ಕೆ ಇದುವರೆಗೂ ಕೋರದೇ ಇರುವುದರಿಂದ ಈ ವಾಹನವನ್ನು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಿದ್ದುದು ಸ್ಪಷ್ಟವಾಗಿರುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂ.ಎ3(ಬಿ1):ಅಮೊ:ಶ್ರೀಗಂಧ:ಬಜಾಜ್ ಚೇತಕ್ ಸ್ಕೂಟರ್:9181/2000-01, ದಿನಾಂಕ: 17ನೇ ಮೇ 2004**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ನೊಂದಣಿ ಸಂಖ್ಯೆ: ಕೆಎ-14-ಹೆಚ್-9181 (ಇಂಜಿನ್ ನಂಬರ್ 06M96A72750, ಛಾಸಿಸ್ ನಂಬರ್ 06F96A98491) ಮತ್ತು 44 ಸಂಖ್ಯೆಯ ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ 21.00 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಹಾಗೂ ಶ್ರೀಗಂಧ ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 17.05.2004 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 805 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**OFFICE OF THE DIRECTOR, DEPARTMENT OF MINES AND GEOLOGY, KHANIJA BHAVAN, RACE COURSE ROAD, BANGALORE - 1.**

**NOTIFICATION**

**No. DMG/AML/ADV/2003-04, Dated: 1st June 2004**

It is hereby informed for the mining public that the area noted below is available for regrant under Rule 59 of M.C.R. 1960.

Applications (Preferably mining lease applications) for grant of mineral concession over the area will be received after the expiry of thirty days (30) from the date of publication of Notification in the Karnataka Gazette. The sketch of the area is available for inspection at the office of the Director, Department of Mines & Geology, Khanija Bhavan, Race Course Road, Bangalore-1, during working hours on all working days. If the day notified for receiving the applications happens to be a public holiday, or General holiday applications will be received on the next working day under amended Rules.

The mining Public should note that the availability of the area published below is subject to the clearance from the Revenue Dept., for mining activities and compliance of the provisions of the MM(D&R) Act - 1957 and the M.C.R.-1960 and all other relevant Acts and Rules by the applicants. In case, the area is found to consists of forest lands, the clearance from the Forest Department, under Section-2 of the Forest (conservation) Act-1980, for utilising the area for Non-Forest activities should be obtained by the applicants.

Interested persons are advised to inspect the area satisfy themselves about the availability of mineral deposits (as the area is surrendered M.L. and determined M.L.) and the present status of the land there in before making application for mining lease.

| Sl. No. | M.L.No. | Mineral | Extent | Sy. Nos. | Location. |
|---|---|---|---|---|---|
| 1. | 2344 | Limestone & Dolomite | 39.23 Acres (16.36Ha) | 13 & 141, 139, 140 | Halki Village Ningapur Village, Mudhol Taluk, Bagalkot dist. |
| 2. | 2170 | Limestone & Dolomite | 12-00 Acres | 311/1+2A/2, 311/1+2A/1, 311/2B-P2 | Yadwad Village, Gokak Taluk, Belgaum District. |
| 3. | 2343 | Limestone & Dolomite | 10-18 Acres | Sy.No.88/1 103/2, 88/2 | Muddapur Village Mudhol taluk, Bagalkot district. |

DIRECTOR

P.R. 850 Department of Mines and Geology Bangalore.